ಕಾಯಕವೇ ಕೈಲಾಸ



# ಸಿದ್ಧಗಂಗಾ



ಮಕರ ಸಂಕ್ರಾಂತಿ ಹಬ್ಬದ ಶುಭಾಶಯಗಳು

ಸಂಪುಟ : ೫೪ ಜನವರಿ ೨೦೧೮ ಸಂಚಿಕೆ : ೦೧



ಲಿಂ. ಶ್ರೀ ಅಟವೀ ಸ್ವಾಮಿಗಳು





ಲಿಂ. ಶ್ರೀ ಉದ್ದಾನ ಶಿವಯೋಗಿಗಳು

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಪೂಜ್ಯ ಅಕ್ಕ ಅನ್ನಪೂರ್ಣ ತಾಯಿಯವರಿಗೆ 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿ ಪ್ರದಾನ ಮಾಡಿದರು. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉಪಸ್ಥಿತರಿದ್ದರು.



ಪರಮಪೂಜ್ಯ ಸಿದ್ಧಲಿಂಗ ಮಹಾಸ್ವಾಮಿಗಳವರು ಪೂಜ್ಯ ಶ್ರೀ ವೀರೇಶಾನಂದ ಸರಸ್ವತಿ ಮಹಾಸ್ವಾಮಿಗಳವರಿಗೆ 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿ ಪ್ರದಾನ ಮಾಡಿದರು. ಈ ಸಂದರ್ಭದಲ್ಲಿ ಮೇದಿನಿ ಮಠದ ಶ್ರೀಗಳವರು ಉಪಸ್ಥಿತರಿದ್ದರು.



ಧಾರವಾಡದಲ್ಲಿ ನಾಡೋಜ ಡಾ. ಚನ್ನವೀರ ಕಣವಿ ಅವರಿಗೆ 'ಸಿದ್ಧಗಂಗಾಶ್ರೀ' ಪ್ರಶಸ್ತಿ ಪ್ರದಾನ ಮಾಡಲಾಯಿತು. ಈ ಸಂದರ್ಭದಲ್ಲಿ ಹಿರಿಯ ವಿದ್ವಾಂಸರಾದ ಡಾ. ಗುರುಲಿಂಗ ಕಾಪಸೆ, ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಕಾರ್ಯದರ್ಶಿ ಶ್ರೀ ಕೆ.ಎಚ್. ಶಿವರುದ್ರಯ್ಯ, ಸಿದ್ಧಗಂಗಾ ಮಾಸಪತ್ರಿಕೆಯ ಸಂಪಾದಕರಾದ ಪ್ರೊ. ಹೆಚ್.ವಿ. ವೀರಭದ್ರಯ್ಯ, ಸಿದ್ಧಗಂಗಾ ಪತ್ರಿಕಾ ಬಳಗದ ಶ್ರೀ ಎಂ. ರೇಣುಕಾರಾಧ್ಯ, ಶ್ರೀ ಕೆ.ಬಿ. ಶಿವಶಂಕರಯ್ಯ ಮೊದಲಾದವರು ಉಪಸ್ಥಿತರಿದ್ದರು.






॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೪ ಜನವರಿ ೨೦೧೮ ಸಂಚಿಕೆ : ೦೧

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
**ಹೆಚ್.ವಿ. ವೀರಭದ್ರಯ್ಯ**

ಸಹ ಸಂಪಾದಕರು :
**ಎಚ್.ಎಸ್. ಸಿದ್ಧಗಂಗಪ್ಪ**

ಪತ್ರಿಕಾ ನಿರ್ವಹಣಾ ಸಮಿತಿ :
**ಎಂ. ರೇಣುಕಾರಾಧ್ಯ**
**ಆರ್.ಎಸ್. ಮಲ್ಲೇಶಪ್ಪ**
**ಕೆ.ಬಿ. ಶಿವಶಂಕರಯ್ಯ**

ಪ್ರಕಾಶನ :
**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು :
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು-572 104.

ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104
ದೂ: 0816-2282322.



## ಒಳಪುಟಗಳಲ್ಲಿ ..................



ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00

## ತುಮಕೂರು ತಾಲ್ಲೂಕು ಊರ್ಡಿಗೆರೆಯಲ್ಲಿ ನಡೆದ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾದ

# ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರಿಗೆ ಅಭಿನಂದನೆ

ಬ್ಯಾತ ಗ್ರಾಮದ ಜ್ಯೋತಿ ಶ್ರೀ ಸಿದ್ಧಗಂಗಾಮಠದ ಕಮ್ಮಟದಲ್ಲಿ ಅರಳಿದ ಹೂವು, ಮೈಸೂರು ವಿಶ್ವವಿದ್ಯಾನಿಲಯದಿಂದ ೧೯೭೫ರಲ್ಲಿ ಕನ್ನಡ ಎಂ.ಎ. ಪದವಿ ಗಳಿಸಿದ ವಿನಯ ವಿದ್ಯಾವಿವೇಕಗಳ ಸದ್ಗುಣಿ. ೧೯೭೮ರಿಂದ ೧೯೮೮ರವರೆಗೆ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ವೃತ್ತಿ, ೧೯೮೯ರಿಂದ ಕರ್ನಾಟಕ ವಿಕಾಸ ಪತ್ರಿಕೆ ಸಹಾಯಕ ಸಂಪಾದಕನಾಗಿ, ಸಂಪಾದಕನಾಗಿ ನಡೆದು ಬಂದ ಸಮರ್ಥ ಸಾಧಕ. ಸಾಹಿತ್ಯ ಕ್ಷೇತ್ರದಲ್ಲಿ ೧೯೭೮ ರಿಂದ ಹಳ್ಳಿಯ ಬಳ್ಳಿ ಬೀದರ್ ಜಿಲ್ಲೆಯ ಶಿಶುಪ್ರಾಸಗಳು, ಸಿದ್ಧಗಂಗೆಯ ಸಿದ್ಧಶುದ್ಧ ಶಿವಕುಮಾರ ಶಿವಯೋಗಿ, ಉದ್ದಾನ ಶಿವಯೋಗಿಗಳು, ಜ್ಞಾನದಾಸೋಹದ ಗೌರಿಶಂಕರ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಕರ್ನಾಟಕ ರತ್ನ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಮರಳೇಗವಿಮಠ, ಜನಪದ ಸಂಶೋಧನ ತೆನೆಗಳು, ಶರಣರ ಸಂವೇದನೆಗಳು, ಸಿದ್ಧಾಂತ ಶಿಖಾಮಣಿಯಲ್ಲಿ ದಾಸೋಹ, ಮುಂತಾಗಿ ೩೪ ಕೃತಿಗಳನ್ನು ರಚಿಸಿರುವ ವಿದ್ವದ್ ಬಂಧು, ಸಂಪಾದಕನಾಗಿ ಅಖಿಲ ಭಾರತ ೬೫ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಹುಬ್ಬಳ್ಳಿ ಗೋಷ್ಠಿಯಲ್ಲಿ ಪಾಲ್ಗೊಂಡವರು ಮುಂತಾದ ೧೫ ಕೃತಿಗಳ ಸಂಪಾದಕ, ಹಳ್ಳಿಯ ಹಣತೆ ನೆನಹಿನ ಸಂಚಿಕೆ ಮೊದಲುಗೊಂಡು, ಸಿದ್ಧಗಂಗಾ ಗುರುವಂದನಾ ಸಂಚಿಕೆಗಳು, ಅಮೃತಗಂಗಾ, ನಿಬ್ಬೆರಗು, ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜನ್ಮಶತಮಾನೋತ್ಸವ ಸಿದ್ಧಗಂಗಾ ವಿಶೇಷ ಸಂಪುಟ, ಸುವರ್ಣಸಿರಿ, ನಿರಂಜನ ಸಿದ್ಧಗಂಗಾ ವಿಶೇಷ ಸಂಪುಟ, ಅನುಭಾವಪಥ, ಯುಗಗಂಗಾ, ಜ್ಞಾನದಾಸೋಹ ಮಣಿಮಾಲೆ ೧೦೮ ಕೃತಿಗಳ ಸಂಪಾದಕರಲ್ಲಿ ಒಬ್ಬರಾಗಿ ಸೇವೆ ಸಲ್ಲಿಸಿದ್ದಾರೆ. ಪತ್ರಿಕಾ ಕ್ಷೇತ್ರದಲ್ಲಿ ಕನ್ನಡ ನುಡಿಯ ಸಂಪಾದಕರಾಗಿ, ಸಿದ್ಧಗಂಗಾ ಮಾಸಪತ್ರಿಕೆಯ ಸಹ-ಸಂಪಾದಕ ೧೯೯೭ ರಿಂದ, ಮಹಾಮನೆ ಸಂಪಾದಕರಾಗಿ, ಬಸವ ಸಮಿತಿ ಪ್ರಕಟಣೆ ಹಾಗೂ ಸಂಶೋಧನಾ ವಿಭಾಗದ ನಿರ್ದೇಶಕರಾಗಿ ಸೇವೆ ಸಲ್ಲಿಸಿರುವ ಸಂಸ್ಥೆಗಳು.

ಶ್ರೀಯುತರು 'ಹೂತಿಟ್ಟ ಹಣವೆಲ್ಲ ಮಣ್ಣಾಗಿ ಹೋದಾಗ', 'ಸಾಕು ಮಾಡೀ ಶಿವನೆ', 'ರಂಗಣ್ಣನ ಕಥೆ', 'ಜಾನಪದ ಸಂಶೋಧನಾ ತೆನೆಗಳು' ಕೃತಿಗೆ ಡಾ. ಗೊ.ರು.ಚ. ರಾಜ್ಯಮಟ್ಟದ ದತ್ತಿ ಪ್ರಶಸ್ತಿ ಮೊದಲಾಗಿ ಬಹುಮಾನಿತ ಕೃತಿಕರ್ತರು.

ಪ್ರಶಸ್ತಿ ಪುಷ್ಪ ಅಲಂಕೃತರಾಗಿರುವ ಶ್ರೀ ಸಿದ್ಧಗಂಗಪ್ಪನವರು ಕುವೆಂಪು ವಿಶ್ವಮಾನವ ಪ್ರಶಸ್ತಿ, ಶರಣ ಜ್ಯೋತಿ ಪ್ರಶಸ್ತಿ, ಪರಮೇಶಿ ಪುಲಕೇಶಿ ಪ್ರಶಸ್ತಿ, ಜಾನಪದ ಸಾಹಿತ್ಯರತ್ನ ಪ್ರಶಸ್ತಿ, ಸಿದ್ಧಗಂಗಾ ಶಿವಕುಮಾರಶ್ರೀ ಪ್ರಶಸ್ತಿ, ಸಾಹಿತ್ಯಸಿರಿ, ಪ್ರಶಸ್ತಿಗಳಿಂದ ಪುರಸ್ಕೃತರಾಗಿದ್ದಾರೆ.

ಶ್ರೀಯುತರು ಸಂಯುಕ್ತ ಕರ್ನಾಟಕ, ಕನ್ನಡಪ್ರಭ, ವಿಜಯ ಕರ್ನಾಟಕ, ತರಂಗ, ವಿಶಾಲ ಕರ್ನಾಟಕ, ಲೋಕವಾಣಿ, ಕಸ್ತೂರಿ, ಕನ್ನಡನುಡಿ, ಮಯೂರ, ಸಿದ್ಧಗಂಗಾ ಪತ್ರಿಕೆಗಳ ಮೂಲಕ ತಮ್ಮ ವಿಚಾರಸಂಪತ್ತನ್ನು ಪ್ರಕಟಿಸಿದ್ದಾರೆ. ಆಕಾಶವಾಣಿ, ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿದ್ದಾರೆ. ಆಕಾಶವಾಣಿಯ ಸಲಹಾ ಸಮಿತಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಅನೇಕ ಕಮ್ಮಟಗಳಲ್ಲಿ ಭಾಗವಹಿಸಿದ್ದಾರೆ.

ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರನ್ನು ಶ್ರೀ ಸಿದ್ಧಗಂಗಾ ಮಠದ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಮುಗಬಾಳದ ಶ್ರೀ ವೀರಭದ್ರಸ್ವಾಮಿ ಕಲ್ಯಾಣ ಮಂಟಪದ ಉದ್ಘಾಟನಾ ಸಮಾರಂಭದಲ್ಲಿ ಸನ್ಮಾನ, ಬೆಂಗಳೂರಿನ ಸರ್ಪಭೂಷಣ ಶಿವಯೋಗಿಗಳ ಮಠದ ಟ್ರಸ್ಟ್ ವತಿಯಿಂದ ಏರ್ಪಡಿಸಿದ್ದ ದ್ವಿಶತಮಾನೋತ್ಸವ ಸಮಾರಂಭದಲ್ಲಿ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು, ಶ್ರೀ ಮುರುಘಾಮಠದ ಚಿತ್ರದುರ್ಗದ ಪೂಜ್ಯ ಶ್ರೀ ಶಿವಮೂರ್ತಿ ಮುರುಘಾ ಸ್ವಾಮಿಗಳ, ಆದಿಚುಂಚನಗಿರಿ ಕ್ಷೇತ್ರದ ಜಗದ್ಗುರು ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳವರ ಸಾನ್ನಿಧ್ಯದಲ್ಲಿ, ಈಶ್ವರ ಸೇವಾಮಂಡಳಿ ಹಾಗೂ ವೀರಶೈವ ಸಮನ್ವಯ ಸಮಿತಿ ಆಶ್ರಯದಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಜಾನಪದ ಹಾಗೂ ಪತ್ರಿಕಾ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆಗಾಗಿ ಶ್ರೀಮದ್ ಕಾಶಿಜ್ಞಾನ ಸಿಂಹಾಸನಾಧೀಶ್ವರ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಭಗವತ್ಪಾದರಿಂದ, ಶ್ರೀಮಠ ಸಿದ್ಧಗಂಗಾದಲ್ಲಿ

.......ಪುಟ ೬ರಲ್ಲಿ ಮುಂದುವರದಿದೆ







## ಸಾಮಾಜಿಕ ಆಂದೋಲನಕ್ಕೆ ನಾಂದಿ ಹಾಡಿದ ಮಾನವೀಯತೆಯ ಸಾಕಾರರೂಪಿಯಾದ

# ಬಸವಣ್ಣನವರು

**ಜ**ಗತ್ತಿನ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನ ಬೆಳಕಿನ ಯುಗವಾದದ್ದು. ಆಧ್ಯಾತ್ಮಿಕ ಪ್ರಜ್ಞೆಯಿಂದ ಕೂಡಿದ ಸಾಮಾಜಿಕ ಆಂದೋಲನಕ್ಕೆ ನಾಂದಿ ಹಾಡಿದ ಮಾನವೀಯತೆಯ ಸಾಕಾರರೂಪಿಯಾದ ಬಸವಣ್ಣನವರಿಂದ. ಇಂದಿಗೂ ಅವರು ಕೋಟ್ಯಾಂತರ ಜನರ ಹೃದಯ ಮಂದಿರದಲ್ಲಿ ಶಾಂತಭಾಸ್ಕರರಾಗಿ ರಾರಾಜಿಸುತ್ತಿದ್ದಾರೆ. ಅಹಂ ಮತ್ತು ಶೋಷಣಾರಾಹಿತ್ಯ ಸರಳ ಸಹಜವಾದ ಸಮಾಜ ನಿರ್ಮಾಣಕ್ಕಾಗಿ ಆಧ್ಯಾತ್ಮಿಕ ಮತ್ತು ಭೌತಿಕ ಶಕ್ತಿಗಳಲ್ಲಿ ಏಕತೆಯನ್ನು ಸಾಧಿಸಬೇಕೆಂಬುದನ್ನು ಅವರು 'ಲಿಂಗಜಂಗಮ'ದ ಅಂದರೆ ಕುಂದಿಲ್ಲದ ಸಮಾಜವೆಂಬ ದೇವರ ಮೂಲಕ ತೋರಿಸಿಕೊಟ್ಟರು. ಜನರು ಬಸವ ಪ್ರಜ್ಞಾವಂತರಾದರೆ ಈ ನಾಡು ಸರ್ವವೂ ಸುಂದರವಾಗುವುದರಲ್ಲಿ ಸಂಶಯವಿಲ್ಲ. ಬಸವಪ್ರಜ್ಞೆ ಎಂದರೆ ಸಕಲ ಚರಾಚರಗಳ ಬಗ್ಗೆ ಕಾಳಜಿಯನ್ನಿಟ್ಟುಕೊಂಡು ಪಂಚಮಹಾಭೂತಗಳನ್ನು ಜನಕಲ್ಯಾಣಕ್ಕಾಗಿ ಬಳಸುವ ಸಂಕಲ್ಪದೊಂದಿಗೆ ಬಸವಣ್ಣನವರನ್ನು ಅರಿಯುವುದು, ಕಾಯಕ ಸಿದ್ಧಾಂತಕ್ಕೆ ಬದ್ಧರಾಗುವುದು, ದಾಸೋಹಭಾವಕ್ಕೆ ಸಿದ್ಧರಾಗುವುದು ಲೌಕಿಕ ಮತ್ತು ಆಧ್ಯಾತ್ಮಿಕ ಬದುಕನ್ನು 'ಏಕಕಾಲ'ಕ್ಕೆ ಅನುಭವಿಸುವುದು.

* * *

ಸುಮಾರು ಎಂಟು ನೂರು ವರ್ಷಗಳ ಹಿಂದೆ ಕರ್ನಾಟಕದಲ್ಲಿ ಜನ್ಮತಾಳಿದ ಬಸವಣ್ಣನವರು ಚಿಕ್ಕವಯಸ್ಸಿನಿಂದಲೂ ಉದಾತ್ತ ಮನೋಭಾವುಳ್ಳವರಾಗಿ ದಿನಚರಿಯ ಸಾಮಾಜಿಕ ಜೀವನದಲ್ಲಿ ನಡೆಯುತ್ತಿರುವ ಅನ್ಯಾಯಗಳ ವಿರುದ್ಧ ಪ್ರಬಲ ಹೋರಾಟ ನಡೆಸಿದ ಧೀಮಂತ ವ್ಯಕ್ತಿ. ಧರ್ಮದ ಹೆಸರಿನಲ್ಲಿ ಪ್ರಚಲಿತವಾಗಿದ್ದ ಶೋಷಣೆ, ಮೇಲು ಕೀಳುಗಳೆಂಬ ಕಲ್ಪನೆ, ದೀನ-ದಲಿತರ ದಮನ ಮುಂತಾದ ಅನ್ಯಾಯಗಳನ್ನು ಹೋಗಲಾಡಿಸಲು ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಶ್ರೇಷ್ಠವಾದ ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿದು ಅವುಗಳನ್ನು ಅಳವಡಿಸಿಕೊಂಡು ಎಲ್ಲ ವ್ಯಕ್ತಿಯೂ ಉದ್ಧಾರವಾಗುವುದು ಸಾಧ್ಯವೆನ್ನುವ ಆತ್ಮವಿಶ್ವಾಸವನ್ನು ಮೂಡಿಸಿ ಸಕಲರನ್ನು ಉದ್ಧಾರ ಮಾಡಿದ ಮಹಾತ್ಮ. ಒಟ್ಟಿನಲ್ಲಿ ಶ್ರೇಷ್ಠವರ್ಗದ ಮಾನವತಾವಾದಿಯಾಗಿ ಜಗತ್ತಿನ ಮನುಕುಲದ ಸಮಸ್ಯೆಗಳನ್ನು ಪರಿಹರಿಸಲು ಹೆಣಗಾಡಿದ ಮಹಾನುಭಾವರು ಅವರು.

## ಶ್ರೀ ಸಿದ್ಧಲಿಂಗೇಶ್ವರ ವಚನ



***ಕತ್ತಲೆಯ ಪುರವ ಕಳ್ಳರು ಮುತ್ತಲು***
***ಪುರಪತಿ ಮುತ್ತಿಗೆಗೊಳಗಾದನು ನೋಡಾ ಅಯ್ಯಾ***
***ಅತ್ತಳ ಊರಿಂದ ಬೆಳಗು ಪಸರಿಸಲು***
***ಮುತ್ತಿಗೆ ತೆಗೆದೋಡಿತ್ತೂ ನೋಡಾ***
***ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.***

ಕತ್ತಲೆಯ ಪುರವ – ಅಜ್ಞಾನಕ್ಕಾಶ್ರಯವಾದ ದೇಹವೆಂಬ ನಗರವನು, ಕಳ್ಳರು-ಕಾಮಾದಿ ಅರಿಷಡ್ವರ್ಗಗಳೆಂಬ ತಸ್ಕರರು, ಮುತ್ತಲು – ಅವಗ್ರಹಿಸಲು, ಪುರಪತಿ – ತನುತ್ರಯಂಗಳಿಗೆ ಕರ್ತೃವಾದ ಆತ್ಮನು, ಮುತ್ತಿಗೆಗೆ – ಕಾಮಾದಿ ಅರಿಷಡ್ವರ್ಗಂಗಳ ಬಾಧ್ಯತ್ವಕ್ಕೆ, ಒಳಗಾದನು – ವಶಗತನಾದನು, ನೋಡಾ– ಕಂಡಾ, ಅಯ್ಯಾ ಎಲೆ ಲಿಂಗವೆ, ಅತ್ತಳ ಊರಿಂದ – ಬ್ರಹ್ಮರಂಧ್ರದಿಂದ, ಬೆಳಗು –ನಿಷ್ಕಲ ಬ್ರಹ್ಮದ ಪ್ರಕಾಶವು, ಪಸರಿಸಲು–ಗುರೂಪದೇಶದಿಂದ ಇಷ್ಟಲಿಂಗವಾಗಿ ಬಂದು ಅಂಗದಲ್ಲಿ ಸಂಬಂಧವಾಗಲು, ಆ ಮುತ್ತಿಗೆ – ಕಾಮಾದಿ ಅರಿಷಡ್ವರ್ಗಂಗಳ ಬಾಧ್ಯತ್ವವು, ತೆಗೆದು–ಕಡೆಗಾಗಿ, ಓಡಿತ್ತು – ಓಡು ಪಲಾಯನೆ ಎಂದು ಪಲಾಯನವಾಯಿತ್ತು, ಕಾಣಾ–ಕಂಡಾ, ಮಹಾಲಿಂಗಗುರುಶಿವಸಿದ್ಧೇಶ್ವರಪ್ರಭುವೇ.

*(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು– ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)*

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ರೂಕ್ಷಭಾವದಳೆಲ್ಲ ದೂರಸರಿದವು ಬರದೆ
ಲೋಕಭಾವರಹಿತ ಭವರಹಿತ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ನಿಮ್ಮ ನಿಜದೊಳಗನು ಆರು ಬಲ್ಲರಯ್ಯಾ'
ನಿಮ್ಮ ಸೇವೆಯ ಶಿವಪಥವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗಗನ ಮೀರುವ ತರುಮರಗಳುಂಟೆ?
ನಿಮ್ಮ ನಿಲವನರಿವ ಜನರುಂಟೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲೀಲಾವತಾರಿಯೆ ಲೀಲೆಯ ನಡೆಸಿರುವೆ
ಲಿಂಗಲೀಲೆಯ ಶಿವದೊರೆಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಲದೊಳಗನ ಸೂರ್ಯನೆ ಕಮಲದಳದ ಬಿಂದು
ಲೋಕವ ನಾಕಮಾಡುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಅವರವರ ಭಕುತಿಗೆ ಅವರವರ ದರುಶನಕೆ'
ಶಿವಸಿರಿಯ ದೊರೆಯಾಗಿ ಕಾಣುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಠವೆಂದರೆ ನೀವು ನೀವೆಂದರೆ ಮಠವು
ಮಠದ ಪ್ರಾಣಜೀವಾಳ ನೀವಯ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಏನ ಹೇಳಲಿ ಗುರುವೆ ನಿನ್ನ ಸೇವೆಯಘನವ
ಹಳ್ಳಿಹಳ್ಳಿಗಳಲ್ಲೂ ಅದೆ ಮಾತು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗಗನ ಸದೃಶತಂದೆ ಸಾಗರ ಸದೃಶನೆ
ರವಿಚಂದ್ರನಾಕ ಸದೃಶನೆ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೋಲಿಸಲಾಗದು ನಿನ್ನ ಬೇರಾರಿಗೂ ಗುರುವೆ
ನಿನಗೆ ನೀನೇ ಹೋಲಿಕೆಯು ಲೋಕದೊಳು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







# ಮಹಾಜಂಗಮ ಶ್ರೀ ಆಟವೀ ಸ್ವಾಮಿಗಳು

– ಮುದ್ದೇನಹಳ್ಳಿ ನಂಜಯ್ಯ *

*"ಶೀಲವಂತನಾದಡೆ ಜಾತಿಯ ಬೀಡಬೇಕು,*
*ಶಿವಜ್ಞಾನಿಯಾದೊಡೆ ಸಮಯವ ಬಿಡಬೇಕು,*
*ಹೀಂಗಲ್ಲದೇ ಜಗದಲ್ಲಿ ನಡೆವ ಭ್ರಾಂತರ ಸುದ್ದಿಯೇಕೆ*
*ವಿಭ್ರಾಂತನಾದ ಶರಣಂಗೆ ಅಮುಗೇಶ್ವರಾ."*

ನಿಜವಾದ ಜ್ಞಾನಿ ಜಾತ್ಯಾತೀತ, ಕಾಲಾತೀತ ಹಾಗೂ ಧರ್ಮಾತೀತನಾಗಿರಬೇಕು. ಜಗದಲ್ಲಿನ ಭ್ರಾಂತಿಗೆ ತಲೆಗೊಡದ ನಿಭ್ರಾಂತ ಶರಣ ತಾವರೆ ಎಲೆಯ ಮೇಲಿನ ಬಿಂದುವಿನಂತೆ ಲೌಕಿಕದಲ್ಲಿದ್ದು ಇಲ್ಲದಂತಿರುವುದೇ ಶಿವಜ್ಞಾನಿಯ ಲಕ್ಷಣ ಎನ್ನುವ ರಾಯಮ್ಮನ ವಚನದಂತೆ ಅಟವೀ ಶಿವಯೋಗಿಗಳ ಧ್ಯೇಯವೂ ಇದೇ ಆಗಿರುತ್ತದೆ. ಅಟವೀಶನ ತಾಯಿ ತಂದೆಗಳು ಸುಮತೀದೇವಿ ಸುಜ್ಞಾನದೇವರು. ಸುಮತಿ ಸುಜ್ಞಾನಗಳು ಮೇಳೈಸಿದಲ್ಲಿ ಶಿವಯೋಗಿಯ ಸಾಕ್ಷಾತ್ಕಾರವಾಗುವುದು ಸಹಜ. ಜನಿಸಿದ ಮಗುವಿಗೆ ರುದ್ರಮುನಿ ಶಿವಾಚಾರ್ಯರಿಂದ ಲಿಂಗಧಾರಣ ಪಾದೋದಕ ಲಭಿಸುತ್ತದೆ. ರೇಚಯ್ಯನೆಂದು ನಾಮಕರಣವಾಗುತ್ತದೆ. ಅವಿರಳಜ್ಞಾನಿ ಚನ್ನಬಸವಣ್ಣನವರ ಶಿಷ್ಯ ರೇಚಯ್ಯನೇ ಅಂಕಲಿಗಿಯ ಅಡವಿಯಲ್ಲಿ ತಪಗೈದು ಅಟವೀಶನಾಗಿ ೭೭೭ ವರುಷ ಬಾಳಿದರು ಎಂಬ ಐತಿಹ್ಯವಿದೆ.

ಅಟವೀ ಸ್ವಾಮಿಗಳು ಒಂದು ಕಡೆ ನೆಲೆನಿಂತವರಲ್ಲ. ಅವರು ಸದಾ ಸಂಚಾರಿಗಳು. ಅವರ ಕಾರ್ಯಕ್ಷೇತ್ರ ಮಾತ್ರ ಹೆಚ್ಚಾಗಿ ತುಮಕೂರು ಜಿಲ್ಲೆಯಾಗಿದೆ. ಕ್ರಿ.ಶ. ೧೮೧೫ ರಿಂದ ೧೯೦೧ ರವರೆಗೆ ಜೀವಿಸಿದ್ದ ಅಟವೀಸ್ವಾಮಿಗಳ ಮೂಲ ಬೆಳಗಾವಿ ಜಿಲ್ಲೆಯ ಗೋಕಾಕ ತಾಲ್ಲೂಕಿನ ಅಂಕಲಿಗಿಯಾಗಿದ್ದು ನಂತರ ತುಮಕೂರು ಪ್ರದೇಶದ ಪರಿಸರದಲ್ಲಿ ಸಂಚರಿಸಿ ತುಮಕೂರು ತಾಲ್ಲೂಕಿನ ಚಿಕ್ಕತೊಟ್ಟಿಲುಕೆರೆಯಲ್ಲಿ ಲಿಂಗೈಕ್ಯರಾಗುತ್ತಾರೆ.

ಅಟವೀ ಸ್ವಾಮಿಗಳನ್ನು ಪ್ರತಿಬಿಂಬಿಸುವ ಕುರುಹುಗಳು ಮತ್ತು ತೋರು ಗದ್ದುಗೆಗಳು ತುಮಕೂರು ಜಿಲ್ಲೆಯ ಸಿದ್ಧಗಂಗೆ, ಕೆಂಕೆರೆ, ಗುಬ್ಬಿಯ ತೊರೆಮಠ, ಕುಣಿಗಲ್, ಧಾರವಾಡ ಜಿಲ್ಲೆಯ ಬೆಳ್ಳಗಟ್ಟಿ, ಬ್ರಹ್ಮನಕಟ್ಟಿ ಮಂಟೂರು, ಬೆಳಗಾವಿ ಜಿಲ್ಲೆಯ ಅಂಕಲಗಿ, ಉತ್ತರಗಿ, ಅಥಣಿ, ಚಿಕ್ಕಮಗಳೂರು ಜಿಲ್ಲೆಯ ಗಿರಿಯಾಪುರ, ಶಿವನಿ, ಬೆಂಗಳೂರು ಜಿಲ್ಲೆಯ ಮತಕೂರು ಮೊದಲಾದ ಕಡೆ ಕಾಣಸಿಗುತ್ತವೆ.

ಗುಬ್ಬಿಯ ಚೆನ್ನಬಸವೇಶ್ವರರ ದೇವಾಲಯದ ಎಡಭಾಗದಲ್ಲಿ ಅಟವೀ ಸ್ವಾಮಿಗಳೇ ಭಕ್ತರ ಸಹಕಾರದಿಂದ ೧೮೯೭ರಲ್ಲಿ ಸ್ವತಃ ನಿರ್ಮಿಸಿದ ಕಲ್ಯಾಣಿ ಇದೆ. ಇದಕ್ಕೆ ಪಾಪನಾಶಿನಿ ಎಂದು ಕರೆದು ಶಾಸನವನ್ನು ಬರೆಸಿದ್ದಾರೆ. ಅಲ್ಲದೇ ಚನ್ನಬಸವೇಶ್ವರರಿಗೆ ಬೆಳ್ಳಿಪಲ್ಲಕ್ಕಿ ಮಾಡಿಸಲು ಕೆಲಸ ಆರಂಭಿಸಿದರು. ಅದು ಪೂರ್ಣವಾಗುವ ಮೊದಲೇ ಸ್ವಾಮಿಗಳು ಲಿಂಗೈಕ್ಯರಾಗಿದ್ದರು. ಆ ಪಲ್ಲಕ್ಕಿಯಲ್ಲಿಯೇ ಇಂದಿಗೂ ಚನ್ನಬಸವೇಶ್ವರರ ಉತ್ಸವ ನಡೆಯುತ್ತದೆ.

ಪ್ರತಿವರ್ಷ ಕಾರ್ತೀಕ ಶುದ್ಧ ದಶಮಿಯಲ್ಲಿ ಚಿಕ್ಕತೊಟ್ಟಿಲಕೆರೆ, ಗುಬ್ಬಿಯಲ್ಲಿ ಅವರ ಸಂಸ್ಮರಣ ಮಹೋತ್ಸವ ಜರುಗಿದರೆ, ಜನವರಿಯ ಸಂಕ್ರಾಂತಿ ಸಂದರ್ಭದಲ್ಲಿ ಸಿದ್ಧಗಂಗೆಯಲ್ಲಿ ಗುರು ಶಿಷ್ಯರಾದ ಅಟವೀ ಸ್ವಾಮಿಗಳ, ಉದ್ದಾನ ಸ್ವಾಮಿಗಳ ಆರಾಧನ ಮಹೋತ್ಸವ ಒಟ್ಟಿಗೆ ವಿಜೃಂಭಣೆಯಿಂದ ನಡೆದುಕೊಂಡು ಬರುತ್ತಿದೆ.

ಸಿದ್ಧಗಂಗಾ ಮಠದ ಕಾರ್ಯಾಧ್ಯಕ್ಷರಾಗಿದ್ದುಕೊಂಡು ಏಕಕಾಲದಲ್ಲಿ ಗುಬ್ಬಿ ತೊರೆಮಠ, ಚಿಕ್ಕತೊಟ್ಟಿಲುಕೆರೆ ಮಠವನ್ನು ಅಭಿವೃದ್ಧಿಗೊಳಿಸುವ ಪ್ರಯತ್ನ ಮಾಡಿದರು. ಸಿದ್ಧಗಂಗೆಯಲ್ಲಿದ್ದ ವಟುಗಳಿಗೆ ಸಂಸ್ಕೃತವನ್ನೇಕೆ ಕಲಿಸಬಾರದೆಂದು ಆಲೋಚಿಸಿ ತಮ್ಮ ಆಶ್ರಯದಲ್ಲಿದ್ದ ಕಾಶಿಯಲ್ಲಿ ಅಧ್ಯಯನ ಮಾಡಿ ಪ್ರಕಾಂಡ ಪಂಡಿತರೆನಿಸಿದ ಮತಕೂರು ನಂಜುಂಡ ಶಿವಯೋಗಿಗಳ ಸಲಹೆ ಪಡೆದು ಅಟವೀಸ್ವಾಮಿಗಳು ಮಠದಲ್ಲಿ ಸಂಸ್ಕೃತ ವೇದಪಾಠ ಶಾಲೆಯನ್ನು ಆರಂಭಿಸಿದರು. ಮತಕೂರು ನಂಜುಂಡ ಶಿವಯೋಗಿಗಳು ಅಟವೀಸ್ವಾಮಿಗಳು ಆರಂಭಿಸಿದ ಸಂಸ್ಕೃತ ವೇದಪಾಠ ಶಾಲೆಯಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಅಟವೀ ಸ್ವಾಮಿಗಳ ಪರಮ ಶಿಷ್ಯರಾದ ಉದ್ದಾನ ಶಿವಯೋಗಿಗಳು ೧೯೧೨ ರಲ್ಲಿ ಪಾಠಶಾಲೆಯನ್ನು ಶ್ರೀ ಸಿದ್ಧಲಿಂಗೇಶ್ವರ ವೇದ ಸಂಸ್ಕೃತ ಪಾಠಶಾಲೆಯೆಂದು ಕರೆದು ಎಲ್ಲರಿಗೂ ಉಚಿತವಾಗಿ ಸಂಸ್ಕೃತ ಕಲಿಸುವ ಪರಂಪರೆಗೆ ನಾಂದಿ ಹಾಡಿದರು.

ಸಿದ್ಧಗಂಗೆಯ ಇಂದಿನ ಸೇವಾದಾಸೋಹ ಮಣಿಹಕ್ಕೆ "ತವನಿಧಿ"ಯಾಗಿರುವ ಪರಮಪೂಜ್ಯ ಅಟವೀಸ್ವಾಮಿಗಳವರು ಜ್ಯೋತಿಸ್ವರೂಪಿಗಳು. ಉತ್ತರ ಕರ್ನಾಟಕದಿಂದ ಗುಬ್ಬಿಗೆ ದಯಮಾಡಿ ತೊರೆಮಠವನ್ನು ಸ್ಥಾಪಿಸಿದುದರ ಜೊತೆಗೆ ಗೋಸಲ ಚೆನ್ನಬಸವೇಶ್ವರರ ಕ್ಷೇತ್ರವನ್ನು ಬೆಳಗಿಸಿ ನಂತರ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ತಪಸ್ಸು ಮಾಡುತ್ತಾ ತಪಸ್ಸಿನ ಸಿದ್ಧಿಯನ್ನು ಶ್ರೀ ಉದ್ದಾನ ಶಿವಯೋಗಿಗಳಿಗೆ ಧಾರೆಯೆರೆದುದಲ್ಲದೇ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಂದು ಹಾಕಿದ ದಾಸೋಹದ ಒಲೆ ಅದು ಎಂದೆಂದಿಗೂ ಆರದಿರಲಿ ಎಂದು ಆಶೀರ್ವದಿಸಿ ಉದ್ದಾನಪ್ಪನವರನ್ನು ಉತ್ತರಾಧಿಕಾರಿಗಳನ್ನಾಗಿ ನೇಮಿಸಿದರು.

ಶ್ರೀ ಆಟವೀ ಶಿವಯೋಗಿಗಳು ಆಶ್ವೀಜ ಮಾಸದಲ್ಲಿ ಸಿದ್ಧಲಿಂಗೇಶ್ವರ ಜಾತ್ರೆ ನಡೆಸಲು ಪ್ರಾರಂಭಿಸಿದರು. ಶ್ರೀ ಉದ್ದಾನ ಶಿವಯೋಗಿಗಳವರು ಶಿವರಾತ್ರಿ ಕಾಲದಲ್ಲಿ ಜಾತ್ರೆ ನಡೆಸುವ ಸಂಪ್ರದಾಯ ರೂಢಿಗೆ ತಂದರು.

* ಮುದ್ದೇನಹಳ್ಳಿ, ಬ್ರಹ್ಮಸಂದ್ರ ಅಂಚೆ, ತುಮಕೂರು ತಾಲ್ಲೂಕು ಮತ್ತು ಜಿಲ್ಲೆ-೫೭೨ ೧೨೮

ಅಟವೀಶ, ಅಡವೀಶ, ಅಟವೀಸಿದ್ಧೇಶ್ವರ, ಅಡವೀಶ್ವರ ಎಂಬ ಹೆಸರುಗಳಿಂದ ಕರೆಯುತ್ತಿದ್ದ ಅಟವೀ ಶಿವಯೋಗಿಗಳನ್ನು ಮಠಕೂರು ನಂಜುಂಡ ಶಿವಯೋಗಿಗಳು ತಮ್ಮ ಕೃತಿಯಾದ "ಶ್ರೀಮದಟವೀಶ ಚರಿತ್ರೆ"ಯಲ್ಲಿ ಈ ರೀತಿ ಭಕ್ತಿಯಿಂದ ಸ್ತುತಿಸಿದ್ದಾರೆ.

*ಜಯಗುರುವರ ಜಯಗುರುವರ*
*ಜಯಕಾರುಣ್ಯನಿಧಿ*
*ನಿತ್ಯಾನಂದ ಸುಶೀಲಾ, ನಿರತಾಶ್ರಿತ ಜನಪಾಲ*
*ಶಾಂತಾಕಾರ ಮಹೇಶ, ಜನನಾಮಯ ಭವನಾಶ*
*ಸತ್ಯಾಚಾರ ಧುರೀಣ, ಸನ್ನುತಾ ಮಹಿಮಾವರಣ*
*ಸಾರಾಸಾರವಿಚಾರ, ಸದಮಲ ಗುಣಮಣಿಹಾರ*
*ಅಡವೀಶ ಸುಖಸಾಂದ್ರ, ಪಟುಧುರಿತೇಭ ಮೃಗೇಂದ್ರ.*

ಶ್ರೀಮದಟವೀಶ್ವರರದು ಎತ್ತರವಾದ ನಿಲುವು, ಅದಕ್ಕೆ ತಕ್ಕ ಅಂಗಸೌಷ್ಠವ, ಕೋಲುಮುಖ, ಭಸ್ಮಭೂಷಿತ ನೊಸಲು, ರುಮಾಲಿನ ಮಧ್ಯದಲ್ಲಿ ನೊಸಲಿನಿಂದ ಇಣುಕುವ ರುದ್ರಾಕ್ಷಿ ಶ್ವೇತಗಡ್ಡದಾರಿ, ಕೊರಳಲ್ಲಿ ಇಳಿಬಿಟ್ಟಿರುವ ದಪ್ಪನೆಯ ಹಾಗೂ ಚಿಕ್ಕರುದ್ರಾಕ್ಷಿಮಾಲೆ, ಎದೆಯ ಮೇಲೆ ಕರಡಿಗೆ, ಪದ್ಮಾಸನ ರೂಢ, ಅಭಯಹಸ್ತ, ದಂಡ, ಕಾವಿವಸ್ತ್ರಧಾರಿ.

ಶ್ರೀ ಅಟವೀಸ್ವಾಮಿಗಳು ವಿರಕ್ತ ಪರಂಪರೆಗೆ ಸೇರಿದ್ದರೂ ಗುರುಪೀಠದ ಶಿಷ್ಯರೊಂದಿಗೆ ಉತ್ತಮವಾದ ಬಾಂಧವ್ಯವನ್ನಿಟ್ಟುಕೊಂಡು ಗುರುವಿರಕ್ತರಲ್ಲಿ ಸಮನ್ವಯತೆಯನ್ನು ಸಾಧಿಸಲು ಶ್ರಮಿಸಿದರು.

ಶ್ರೀ ಅಟವೀ ಸ್ವಾಮಿಗಳು ಇತಿಹಾಸ ಪ್ರಸಿದ್ಧರು. ಈ ನೆಲ, ಜಲ ಮತ್ತು ಜನಮನವನ್ನು ತಮ್ಮ ಆಧ್ಯಾತ್ಮಿಕ ನಿಲುವು ಮತ್ತು ಯೌಗಿಕ ಶಕ್ತಿಯಿಂದ ಪಾವನಗೊಳಿಸಿದವರು. ವಿಶೇಷವಾಗಿ ವೀರಶೈವ ಆಚಾರ ವಿಚಾರಗಳನ್ನು ಪುನರುಜ್ಜೀವನಗೊಳಿಸಿದವರು. ಸಿದ್ಧಗಂಗೆಯಲ್ಲಿ ದಾಸೋಹ ಸಂಸ್ಕೃತಿಗೆ ಕಾರಣರಾದವರು. ದೇಶ ಸಂಚಾರ ಮಾಡಿ ಕೊನೆಗೆ ತುಮಕೂರು ಜಿಲ್ಲೆಯ ಚಿಕ್ಕತೊಟ್ಟಿಲಕೆರೆಯಲ್ಲಿ ಸಮಾಧಿಸ್ಥರಾದರು. ಅಭಿನವ ಅಲ್ಲಮನಾಗಿ ಜಗದಲ್ಲಿ ಸುಳಿದ ಮಹಾಜಂಗಮ ಪುಂಗವ ಯತಿವರೇಣ್ಯ ಶ್ರೀ ಅಟವೀಶ ಮಹಾಪ್ರಭು ಪಂಚಭೂತ ಕಾಯವಳಿದರೂ ಪಂಚಾಕ್ಷರ ಮಂತ್ರ ಸ್ವರೂಪರಾಗಿ ಉಳಿದ ಆ ದಯಾಮಯ ಮೂರ್ತಿಗೆ ಶರಣು ಶರಣಾರ್ಥಿಗಳು.

***ಸಂಪಾದಕೀಯ*** *(೨ನೇ ಪುಟದಿಂದ ಮುಂದುವರೆದಿದೆ)*

ಆಯೋಜಿತವಾಗಿದ್ದ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಗುರುವಂದನಾ ಮಹೋತ್ಸವಗಳಲ್ಲಿ, ನೊಣವಿನಕೆರೆ ಕಾಡಸಿದ್ಧೇಶ್ವರ ಮಠದ ಪರಮಪೂಜ್ಯ ಶ್ರೀ ಶ್ರೀ ಕರಿಬಸವ ದೇಶೀಕೇಂದ್ರ ಶಿವಯೋಗೀಶ್ವರರ ಸಾನ್ನಿಧ್ಯದಲ್ಲಿ ಕುವೆಂಪು ವಿಶ್ವಮಾನವ ಪ್ರಶಸ್ತಿ, ಮರಳೇಗವಿಮಠದಲ್ಲಿ ಶ್ರೀಕ್ಷೇತ್ರಾಧ್ಯಕ್ಷರಾದ ಶ್ರೀ ಶ್ರೀ ಕಾಲಾಗ್ನಿರುದ್ರಮುನಿಸ್ವಾಮಿಗಳವರಿಂದ ಗುರುರಕ್ಷೆ, ತಮಿಳುನಾಡಿನ ಹೊಸಮಠದಲ್ಲಿ ಮಠಾಧ್ಯಕ್ಷರಾದ ಷ.ಬ್ರ. ಶ್ರೀ ಕರಿಬಸವ ಸ್ವಾಮಿಗಳವರಿಂದ ಗುರುರಕ್ಷೆ, ಹರಳೂರಿನಲ್ಲಿ ಆಯೋಜಿತವಾಗಿದ್ದ ಸಮಾರಂಭದಲ್ಲಿ ಸನ್ಮಾನ, ಶಿವಗಂಗಾ ಕ್ಷೇತ್ರದಲ್ಲಿ ಏರ್ಪಡಿಸಿದ್ದ ಶ್ರೀ ಶ್ರೀ ರುದ್ರಮುನಿಶಿವಾಚಾರ್ಯರ ದ್ವಾದಶ ಪಟ್ಟಾಧಿಕಾರ ಮಹೋತ್ಸವದಲ್ಲಿ ಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆಗೆ, ಜಾನಪದ ವಿಶ್ವವಿದ್ಯಾನಿಲಯದಿಂದ ಸನ್ಮಾನ, ಮಾಗಡಿ ತಾಲ್ಲೂಕು ಶ್ರೀ ಕಂಚುಗಲ್ ಬಂಡೇಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳಿಂದ **'ಜಾನಪದ ಸಾಹಿತ್ಯರತ್ನ'** ಪ್ರಶಸ್ತಿ, ಅಖಿಲ ಕರ್ನಾಟಕ ಕನ್ನಡ ಚಳುವಳಿ ಕೇಂದ್ರ ಸಮಿತಿಯಿಂದ ಏರ್ಪಡಿಸಿದ್ದ ೫೯ನೇ ಕನ್ನಡ ರಾಜ್ಯೋತ್ಸವದಲ್ಲಿ **'ಪರಮೇಶ್ವರ ಪುಲಕೇಶಿ'** ಪ್ರಶಸ್ತಿ, ಶ್ರೀ ಗೊ.ರು. ಚನ್ನಬಸಪ್ಪನವರ ಅಭಿನಂದನಾ ಸಮಾರಂಭದಲ್ಲಿ ಸಿರಿಗೆರೆ ಪೂಜ್ಯ ಶ್ರೀಗಳವರಿಂದ ಸನ್ಮಾನ, ಕೊಡಗು ಜಿಲ್ಲೆಯ ಶ್ರೀ ಅಲಮೇರಿ ಕಳಂಚೇರಿ ಮಠದಲ್ಲಿನ ನಡೆದ ಲಿಂಗೈಕ್ಯ ಶಾಂತಮಲ್ಲ ಸ್ವಾಮಿಗಳವರ ಜನ್ಮಶತಮಾನೋತ್ಸವ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಗಳವರಿಂದ ಸನ್ಮಾನ ಹಾಗೂ ಅನೇಕ ಸಂಘ ಸಂಸ್ಥೆಗಳು, ಮಠಗಳಿಂದ ಗೌರವಿಸಲ್ಪಟ್ಟಿರುವ ಬಹುಶ್ರುತ ವಿದ್ವಾಂಸರಾಗಿದ್ದಾರೆ.

ಶ್ರೀಯುತರು ಮೈಸೂರು, ಮಂಡ್ಯ, ಮುಧೋಳ, ಹಾಸನಗಳಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳಿಗೆ ವಿಶೇಷ ಆಹ್ವಾನಿತರಾಗಿದ್ದಾರೆ. ಅನೇಕ ವಿಚಾರಗೋಷ್ಠಿಗಳಲ್ಲಿ ಉಪನ್ಯಾಸ, ನಿರ್ವಹಣೆ ಮಾಡುತ್ತ ಮುನ್ನಡೆದಿದ್ದಾರೆ. ಸಾಹಿತ್ಯ ಮತ್ತು ಜಾನಪದ ಕ್ಷೇತ್ರಕ್ಕೆ ಸೇವೆ ಸಲ್ಲಿಸಿದ ಶ್ರೀಯುತರು, ಅನೇಕ ವಿಚಾರಕಮ್ಮಟಗಳು, ಸಾರ್ವಜನಿಕ ಕ್ಷೇತ್ರಗಳಲ್ಲಿ ದುಡಿದಿದ್ದಾರೆ. ಬೆಂಗಳೂರು, ಭದ್ರಾವತಿ ಆಕಾಶವಾಣಿ ಕೇಂದ್ರಗಳ ಮೂಲಕ ೧೦೦ಕ್ಕೂ ಹೆಚ್ಚು ಚಿಂತನ, ಜಾನಪದ ರೂಪಕಗಳು, ಭಾಷಣಗಳು ಪ್ರಸಾರವಾಗಿವೆ.

ಆತ್ಮೀಯ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು 'ಸಿದ್ಧಗಂಗಾ' ಮಾಸಪತ್ರಿಕೆಯ ಜೀವಜೀವಾಳವಾಗಿ ಮುನ್ನಡೆದಿರುವ ಈ ಸಂದರ್ಭದಲ್ಲಿ ಬಸವಾದಿ ಶರಣರು ಹಾಗೂ ಶ್ರೀ ಸಿದ್ಧಗಂಗಾ ಗುರುಪರಂಪರೆ ಸಕಲ ಸನ್ಮಂಗಳವನ್ನು ಅನುಗ್ರಹಿಸಲಿ ಎಂದು ಹಾರೈಸಲಾಗಿದೆ.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಸಂಪಾದಕರು







# ಶ್ರೀ ಉದ್ದಾನ ಶಿವಯೋಗಿಗಳು

– ಪಿ.ಬಿ. ಮೃತ್ಯುಂಜಯಪ್ಪ (ಜಯಣ್ಣ) *

ಉದ್ದಾನೇಶ್ವರರು ಮಾಡುವ ಮಾಟದಲ್ಲಿಯೇ ಮಹಾದೇವನ ಕಂಡವರು.ಅವರು ಮೇಕೆ ಮೇಯಿಸುವ ಕಾಯಕ ಸಿದ್ಧರ ಬೆಟ್ಟದಲ್ಲಿ ನಡೆದಿತ್ತು. ಬೆಟ್ಟದಲ್ಲಿ ಮೇಕೆಗಳು ಮೇಯಿಯುತ್ತಿರಲು ರುದ್ರಪ್ಪನವರು ಸಮತಟ್ಟಾದ ಬಂಡೆಯ ಮೇಲೆ ಪದ್ಮಾಸನರಾಗಿ ಆತ್ಮಾನುಸಂಧಾನದಲ್ಲಿ ನಿರತರಾಗಿ ಸಮಾಧಿಸ್ಥರಾಗಿರುತ್ತಿದ್ದರು. ಸಿದ್ಧರ ಬೆಟ್ಟದ ಗವಿಯಲ್ಲಿ ಅನುಷ್ಠಾನನಿರತ ಯೋಗಿಗೊಳೊಂದಿಗೆ ಸಂಭಾಷಿಸುತ್ತಿದ್ದರು. ಆ ಸೂಕ್ಷ್ಮ ಶರೀರದ ಯೋಗಿಗಳೊಂದಿಗೆ ಲೋಕಕಲ್ಯಾಣದ ಮರ್ಮವನ್ನು ಚರ್ಚಿಸುತ್ತಿದ್ದರು. ಇವರು ಬಂಡೆಯ ಮೇಲೆ ಸಮಾಧಿಸ್ಥರಾದರೆ ಸೂರ್ಯಾಸ್ತದಪರಿವೆ ಇರುತ್ತಿರಲಿಲ್ಲ. ಮನೆಯವರು ಹುಡುಕಿಕೊಂಡು ಬಂದು ನೋಡಿದರೆ ಉದ್ದಾನೇಶ್ವರರು ಧ್ಯಾನದಲ್ಲಿ ತಲ್ಲೀನರಾಗಿದ್ದಾರೆ. ಸುತ್ತ ಮೇಕೆಗಳು ಮೇದು ಬಂದು ಮೆಲುಕು ಹಾಕಾತ್ತಾ ಮಲಗಿವೆ. ಮೇಕೆ ತಿನ್ನಲೆಂದು ಬಂದ ತೋಳ ಮೇಕೆಯ ಹತ್ತಿರ ಬರಲಾರದೆ ನಿಂತಿದೆ. ಇಂತಹ ಅಲೌಕಿಕ ಲೀಲೆಯಲ್ಲಿ ಉದ್ದಾನೇಶ್ವರರು ಪೂರ್ವಾಶ್ರಮದ ಲೀಲೆಗಳು ಕಳೆದವು. ಸಿದ್ಧಗಂಗೆಗೆ ಬಂದು ಅಟವೀಶ್ವರರ ಕೃಪೆಗೆ ಪಾತ್ರರಾಗಿ ಸಿದ್ಧಗಂಗೆಯ ಸೇವಾಮಣಿಹವನ್ನು ಪ್ರಾರಂಭಿಸಿದರು.

ಗೋಸಲ ಸಿದ್ಧೇಶ್ವರ ಪಾದ ಮಹಿಮೆಯ ಪುಣ್ಯ ಕ್ಷೇತ್ರಕ್ಕೆ ಉದ್ದಾನೇಶ್ವರರ ಆಗಮನ ಅರುಣೋದಯದ ಕಾಲವಾಗಿದೆ. ಸಿದ್ಧಗಂಗೆಯ ಗವಿಯಲ್ಲಿ ಪಾಪ ಪರಿಹಾರವನ್ನು ಸಿದ್ಧಗಂಗಾ ಮಾತೆ ಭಕ್ತರನ್ನು ಪಾವನ ಮಾಡುತ್ತಿರುವಳು.

ಸಿದ್ಧಗಂಗೆಯ ಬೆಟ್ಟದ ತಪ್ಪಲಿನ ಹಳೆಮಠಲ್ಲಿ ಉತ್ತರದಿಂದ ಆಗಮಿಸಿದ ಮಹಿಮಾ ಪುರುಷ ಶ್ರೀ ಅಟವೀಶ್ವರರು ಬಂದ ಭಕ್ತರ ಪರಿತಾಪ ಪರಿಹರಿಸುವ ಕಾರುಣ್ಯ ಮೂರ್ತಿಯಾಗಿದ್ದರು. ಉತ್ತರದಿಂದ ಹಲವು ಶರಣ ಕ್ಷೇತ್ರಗಳನ್ನು ಅಭಿವೃದ್ಧಿಪಡಿಸುತ್ತಾ ಬಂದ ಅಟವೀಶ್ವರರು ಸಾಗರವಳ್ಳಿಯ ಕಲ್ಯಾಣಪ್ಪನ ಗದ್ದುಗೆ, ಗುಬ್ಬಿ ತೋರೆಮಠ, ಚಿಕ್ಕತೊಟ್ಟಲಕೆರೆ ಮಠಗಳನ್ನು ಸಮಾಜ ಸೇವೆಗೆ ವ್ಯವಸ್ಥೆ ಮಾಡಿ ಸಿದ್ಧಗಂಗಾ ಕ್ಷೇತ್ರದ ಅಧ್ಯಕ್ಷರಾಗಿದ್ದ ಶ್ರೀ ಸಿದ್ಧಲಿಂಗ ಸ್ವಾಮಿಗಳು ಅಧ್ಯಾತ್ಮ ಸಾಧನೆಯಲ್ಲಿ ತೊಡಗಿದ್ದ ಕಾರಣ



ಸಿದ್ಧಗಂಗೆಯ ವ್ಯವಸ್ಥೆ ನೋಡಿಕೋಳುತ್ತಿದ್ದರು. ಆಗ ಬಂದವರೆ ರುದ್ರಪ್ಪನವರು. ರುದ್ರಪ್ಪನವರು ಶ್ರೀ ಕ್ಷೇತ್ರಕ್ಕೆ ಬರುವ ವೇಳೆಗೆ ಸರ್ವ ಸಿದ್ಧಿಗಳನ್ನು ಸಿದ್ಧಿಸಿಕೊಂಡಿದ್ದರು. ಶ್ರೀ ಅಟವೀಶ್ವರರು ರುದ್ರಪ್ಪನವರನ್ನು ಕಂಡು ನಾನು ಹುಡುಕುತ್ತಿದ್ದ ಶಿಷ್ಯ ದೊರೆತನೆಂದು ಆನಂದಪಟ್ಟರು. ರಾಮಕೃಷ್ಣ ಪರಮಹಂಸರು ನರೇಂದ್ರನ ಕಂಡಂತೆ, ಪರಮಹಂಸರಿಂದ ನರೇಂದ್ರ ವಿವೇಕಾನಂದರಾದಂತೆ ಶ್ರೀ ಅಟವೀಶರಿಂದ ರುದ್ರಪ್ಪನವರು ಶ್ರೀ ಉದ್ದಾನಸ್ವಾಮಿಗಳಾದರು. ಪರಮಹಂಸರ ಪಾದ ಸ್ಪರ್ಶದಲ್ಲೂ ನರೇಂದ್ರನಿಗೆ ಮೈಕಂಪಿಸುವ ಅನುಭವವಾಗಿ ಶಿಷ್ಯರಾದರು. ಆದರೆ ಸಿದ್ಧಗಂಗೆಯಲ್ಲಿ ರುದ್ರಪ್ಪನವರ ಸೇವೆಯಿಂದ ಅಚ್ಚರಿಗೊಂಡ ಅಟವೀಶ್ವರರು ರುದ್ರಪ್ಪನವರನ್ನು ಶ್ರೀ ಉದ್ದಾನೇಶ್ವರರಾಗಿ ಮಾಡಿದರು.

ಧನುರ್ಮಾಸದ ಸಮಯ ಶ್ರೀ ಅಟವೀಶ್ವರರಿಗೆ ಶಿವಪೂಜೆಗೆ ಅಣಿಮಾಡಿ ಪ್ರಸಾದ ನೀಡುವ ಕಾಯಕ ರುದ್ರಪ್ಪನವರಿಗೆ ಬಂತು. ಅಟವೀಶ್ವರರಿಗೆ ಆಸ್ತಮದ ಭಾದೆ ಇತ್ತು. ಅದು ಧನುರ್ಮಾಸದ ಶೀತಗಾಳಿಯಲ್ಲಿ ಉಲ್ಬಣವಾಗಿ ದೇಹ ಭಾದೆ ಕೆಡುತ್ತಿತ್ತು. ರುದ್ರಪ್ಪನವರು ಶ್ರೀ ಅಟವೀಶ್ವರರ ಪೂಜಾ ಕೈಂಕರ್ಯಕ್ಕೆ ನಿಂತ ಬಳಿಕ ಗುರುಗಳಿಗೆ ಪ್ರಸಾದ ನೀಡುವಾಗ ಹತ್ತಿ ಚಕ್ಕೆಯ ಕಶಾಯ ತಯಾರಿಸಿ ನೀಡುತ್ತಾ

* ಬಸವ ಮೋಟಾರ, ದೊಡ್ಡಸಾರಂಗಿ, ತುಮಕೂರು ತಾ.

ಬಂದರು. ಉಷ್ಣ ಪ್ರಧಾನ ಪ್ರಸಾದ, ಗುರುಭಕ್ತಿ, ಪ್ರಸಾದ ತಯಾರಿಕಾ ನಿಷ್ಠೆಯಿಂದ ಕಷಾಯ ಮಾಡಿ ಶ್ರೀ ಅಟವೀಶ್ವರರಿಗೆ ಬಾಧಿಸುತ್ತಿದ್ದ ಆಸ್ತಮ ಇಲ್ಲವಾಯಿತು. ಶಿವಪೂಜೆಗೆ ಅಣಿ ಮಾಡುವ ಶ್ರದ್ಧೆ, ಗುರು ಸೇವೆಯಲ್ಲೂ ಭಕ್ತಿ, ಪ್ರಸಾದ ತಯಾರಿಸುವ, ನೀಡುವ ಅವದಾನ (ಎಚ್ಚರ) ಇವುಗಳಿಂದ ಶ್ರೀ ಅಟವೀಶ್ವರರು ಸಂತೋಷಪಟ್ಟರು. ಜಂಗಮ ಮೂರ್ತಿಯ ದೇಹ ತಾಪ ಪರಿಹರಿಸುವ ಅಂತಹ ಶಕ್ತಿ ಇರುವ ನೀನು ಜಂಗಮ ಮೂರ್ತಿಯೇ ಎಂದು ರುದ್ರಪ್ಪನವರಿಗೆ ಕಾವಿಂಯುಡಿಗೆ ಉಡಿಸಿ ಶ್ರೀ ಉದ್ದಾನೇಶ್ವರರನ್ನಾಗಿ ಮಾಡಿದರು.

ಶ್ರೀ ಅಟವೀಶ್ವರರಿಗೆ ಶ್ರೀ ಉದ್ದಾನ ಶಿವಯೋಗಿಗಳ ಮೇಲೆ ಬಹು ಮಮತೆ ಮತ್ತು ಪ್ರೀತಿಯಿತ್ತು. ಶ್ರೀ ಅಟವೀಶ್ವರರು ಇಹಲೋಕ ಯಾತ್ರೆಯ ಕಡೆಯ ಮೂರನೆ ದಿನದಲ್ಲೂ ತುಮಕೂರಿನ ಸದ್ಭಕ್ತರ ಮನೆಯಲ್ಲೂ ಶುಶ್ರೂಶೆಯಲ್ಲಿರುತ್ತಾರೆ. ಅಲ್ಲಿಗೆ ಶ್ರೀ ಉದ್ದಾನೇಶ್ವರರು ಗುರು ದರ್ಶನಕ್ಕೆ ಹೋಗುತ್ತಾರೆ. ಆ ವೇಳೆಗೆ ಶ್ರೀ ಅಟವೀಶ್ವರರು ಮಂತ್ರಾನು ಸಂಧಾನದಲ್ಲಿ ನೇತ್ರಗಳನ್ನು ಮುಚ್ಚಿ ಮಲಗಿರುತ್ತಾರೆ. ಉದ್ದಾನೇಶ್ವರರ ಪಾದ ಮುಟ್ಟಿ ನಮಸ್ಕರಿಸುತ್ತಾರೆ. ಶ್ರೀ ಅಟವೀಶ್ವರರು ಸ್ವತಃ ಕಣ್ ತೆರೆದು ಸನ್ನೆ ಮಾಡಿ ಬಳಿ ಕರೆಯುತ್ತಾರೆ. ಉದ್ದಾನೇಶ್ವರರು ಬಳಿ ಬಂದಾಗ ಜಿಹ್ವೆಯ ದ್ರವವಿಲ್ಲದೆ ಮಾತನಾಡಲಾಗದ ಸ್ಥಿತಿಯಲ್ಲಿ ಶ್ರೀ ಅಟವೀಶ್ವರರಿರುತ್ತಾರೆ. ಶ್ರೀ ಉದ್ದಾನೇಶ್ವರರು ತಮ್ಮಲಿದ್ದ ಉತ್ತುತ್ತೆ ಹಣ್ಣನ್ನು ಬಿಡಿಸಿ ಸಣ್ಣ ಚೂರು ಮಾಡಿ ಶ್ರೀ ಅಟವೀಶ್ವರರ ಬಾಯಲ್ಲಿ ಶಿವನಾಮ ಸ್ಮರಣೆಯೊಂದಿಗೆ ಇಡುತ್ತಾರೆ. ಬಾಯಲ್ಲಿ ದ್ರವ ಸ್ರವಿಸಿ ಶ್ರೀ ಅಟವೀಶ್ವರರು ಮೆಲು ನುಡಿಯಲ್ಲಿ ನಿನ್ನನ್ನು ಕಂಡರೆ ಬಹುಮಂದಿಗೆ ಸಹನೆಯಿಲ್ಲ. ಆದರೆ ನಾನು ನಿನ್ನೊಂದಿಗಿದ್ದೇನೆ ಹೆದರಬೇಡೆಂದು ಶಿರದಡಹಿ ಹರಸಿ ಬೀಳ್ಕೊಡುತ್ತಾರೆ. ಈ ಸನ್ನಿವೇಶವನ್ನು ಶ್ರೀ ಉದ್ದಾನೇಶ್ವರರು ಅವರ ಪ್ರೀತಿಯ ಶಿಷ್ಯನಾದ ದೇಗುಲ ಮಠದ ಇಮ್ಮಡಿ ಮಹಾಲಿಂಗ ಸ್ವಾಮಿಗಳಲ್ಲಿ ಹೇಳಿದ್ದನ್ನು ನನ್ನ ಗುರುಗಳಾದ ದೇಗುಲ ಮಠದ ಪೂಜ್ಯರು ಈ ರೀತಿ ಹಲವು ಸಲ ಹೇಳುತ್ತಿದ್ದರು.

**ಶ್ರೀ ಉದ್ದಾನೇಶ್ವರ ವಾಣಿ :** ನನ್ನ ಗುರುಗಳ ನನಗೆ ಅಂದು ತಮ್ಮ ಸರ್ವಸ್ವವನ್ನು ಅನುಗ್ರಹಿಸಿದರು. ಅಂದು ನನ್ನ ಗುರುಗಳು ನನಗಿತ್ತ ಆ ತಪೋನಿಧಿಯೇ ಸಿದ್ಧಗಂಗೆಯ ಅಭಿವೃದ್ಧಿಯ ಮಂತ್ರ. ನನ್ನನ್ನು ಸಿದ್ಧಗಂಗೆಯಲ್ಲಿ ನಿಲ್ಲುವಂತೆ ಮಾಡಿತು. ಅದೊಂದು ಶಬ್ದಾತೀತ ಅವರ್ಣನೀಯ ಆತ್ಮಾನಂದ. ನನ್ನನ್ನು ಆಶೀರ್ವದಿಸಿ ಕಳಿಸಿದ ಮೂರನೆ ದಿನಕ್ಕೆ ಲಿಂಗೈಕ್ಯರಾದರು. ನಾನು ಗುರುಗಳ ಅಂತ್ಯ ವಿಧಿ ಪೂರೈಸಿ ಬರುವಷ್ಟರಲ್ಲಿ ರಾತ್ರಿಯಾಗಿತ್ತು. ಹಳೆಮಠದಲಿದ್ದ ಪಾತ್ರೆ ಪಡಗಳನ್ನು ಕಳವು ಮಾಡಲಾಗಿತ್ತು. ಲಿಂಗಾರ್ಚನೆಗೂ ಪಾತ್ರೆಗಳಿಲ್ಲದ ಪರಿಸ್ಥಿತಿ. ನಾನು ಮನೆ ಬಿಟ್ಟು ಬರುವಾಗ ದುಃಖವಾಗಿರಲಿಲ್ಲ. ಶ್ರೀಮಠದ ಆಸ್ತಿ ರಕ್ಷಿಸಲಾಗಲಿಲ್ಲವಲ್ಲ ಎಂದು ದುಃಖಿಸುತ್ತಾ ಮಲಗಿದೆ. ಗುರುಗಳು ನನ್ನ ಕನಸಿನಲ್ಲಿ ಬಂದು ನನಗೆ ಸಿದ್ಧಗಂಗೆಯಲ್ಲಿ ಗದ್ದುಗೆ ನಿರ್ಮಿಸು ಎಂದರು. ನನಗೆ ಮತ್ತಷ್ಟು ದುಃಖವಾಯಿತು. ದುಃಖದಲ್ಲಿ ಮಲಗಿದರೆ, ಮತ್ತೆ ಕನಸಿನಲ್ಲಿ ಬಂದ ಗುರುಗಳು ನಾನಿದ್ದೇನೆ ಹೆದರಬೇಡ ಎಂದು ಅಭಯವಿತ್ತರು. ಬೆಳಗಾಗೆದ್ದು ಅಲ್ಲಿ ಇಲ್ಲಿ ಹುಡುಕಿ ಹೇಗೋ ಸ್ನಾನಾದಿ ಪೂಜೆಗಳ ಮುಗಿಸಿ ಈಗ ಅಟವೀಶ್ವರರ ಗದ್ದುಗೆ ಇರುವ ಜಾಗದಲ್ಲಿ ಬೆಳೆದಿದ್ದ ಗಿಡಗುಂಟೆಗಳನ್ನು ಮೇಕೆ ಮೇಯಿಸ ಬಂದ ಬಾಲಕರಿಂದ ಕಡಿಸಿ ಸ್ವಚ್ಛ ಮಾಡಿ ಗದ್ದುಗೆಯ ಭೂಮಿಪೂಜೆಗೆ ಸಿದ್ಧ ಮಾಡಿಸಿದೆ. ಆಗ ಬೆಂಗಳೂರಿನಿಂದ ಬಂದ ಮರಾಠಿ ಭಕ್ತ ಬಂದು ಎರಡು ನೂರು ಬೆಳ್ಳಿ ನಾಣ್ಯಗಳನ್ನು ಕಾಣಿಕೆಯಾಗಿ ಅರ್ಪಿಸಿದ. ನನ್ನ ಗುರುಗಳು ಆಶೀರ್ವದಿಸಿದಂತೆ ಕನಸಿನಲ್ಲಿ ಆದೇಶಿಸಿದಂತೆ ಗುರುಕರಣೆ ಅರಿಯುತ್ತಾ ಬಂತು. ಶ್ರೀಮಠ ಬೆಳೆಯುತ್ತಾ ಹೋಯಿತು" ಎಂದು ಶ್ರೀ ಉದ್ದಾನೇಶ್ವರರು ದೇಗುಲ ಮಠದ ಪೂಜ್ಯರಲ್ಲಿ ಹೇಳುತ್ತಿದ್ದರಂತೆ.

ಶ್ರೀ ಉದ್ದಾನೇಶ್ವರರು ಬಹಳ ಓದಿದವರಲ್ಲ, ಆದರೆ ಅವರು ಉಪನಿಷತ್ ವಾಖ್ಯಗಳನ್ನು ಉದಾಹರಿಸುತ್ತಿದ್ದರು ಎಂದು ದೇಗುಲಮಠದ ಶ್ರೀಗಳು ಹೇಳುತ್ತಿದ್ದರು. ದೇಗುಲಮಠದ ಪೂಜ್ಯರು ಪಂಚಪುರುಷ ಮಾಡಿದ ನಮ್ಮ ಗುರುಗಳು ಎಂದು ಅಭಿಮಾನದಿಂದ ಹೇಳುತ್ತಿದ್ದರು.

ದೇಗುಲಮಠದ ಪೂಜ್ಯರು ವೈರಾಗ್ಯದ ಸಾಕಾರ ಮೂರ್ತಿ, ಸಕಲ ಜೀವರಾಶಿಯಲ್ಲಿ ದಯಾಭಾವದವರಾಗಿದ್ದ ಇಮ್ಮಡಿ ನಿರ್ವಾಣೇಶ್ವರರ ಉತ್ತರಾಧಿಕಾರಿಗಳು. ಶ್ರೀ ಶ್ರೀ ಇಮ್ಮಡಿ ನಿರ್ವಾಣೇಶ್ವರರು ಸೊಳ್ಳೆ, ತಿಗಣೆ, ನಾಯಿ, ಬೆಕ್ಕು, ಹಸು, ಕರುಗಳೆಲ್ಲವನ್ನು ಕರುಣಾ ದೃಷ್ಟಿಯಿಂದಲೇ ನೋಡುತ್ತಿದ್ದ ಮಹಾನುಭಾವರು. ಅವರು ಸಿದ್ಧಗಂಗೆಗೆ ಬಂದು ಉದ್ದಾನೇಶ್ವರರ ಸೂಚನೆಯ ಮೇರೆಗೆ ಶ್ರೀ ಶ್ರೀ ಇಮ್ಮಡಿ ಮಹಾಲಿಂಗ ಸ್ವಾಮಿಗಳನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ನೇಮಿಸಿಕೊಂಡರು. ಶ್ರೀ ಶ್ರೀ ಇಮ್ಮಡಿ ಮಹಾಲಿಂಗ ಸ್ವಾಮಿಗಳನ್ನೇ ಲೇಖನದಲ್ಲಿ ದೇಗುಲಮಠದ ಪೂಜ್ಯರೆಂದು ಸಂಬೋಧಿಸುತ್ತಿದ್ದೇನೆ. ದೇಗುಲಮಠದ ಪೂಜ್ಯರು ತಮ್ಮ ಗುರುಗಳಿಗಿಂತ ಮಿಗಿಲಾಗಿ ಶ್ರೀ ಉದ್ದಾನೇಶ್ವರರಿಗೆ ಭಕ್ತಿ ಭಾವದಿಂದ ನಡೆದುಕೊಳ್ಳುತ್ತಿದ್ದರು. ದೇಗುಲ ಪೂಜ್ಯರ ವಾಣಿಯಲ್ಲಿ ಹೇಳುವುದಾದರೆ ನಾನು ಓದಿದವನಲ್ಲ, ಸ್ವಾಮಿತ್ವ ಎಂದರೆ ಬಹುದೊಡ್ಡದು. ನನ್ನಂತವನಿಂದ ಆಚರಿಸಲಾಗುವುದಿಲ್ಲ, ಗುರು ಶ್ರೀ





ಉದ್ದಾನೇಶ್ವರರ ಪಾದ ಸೇವೆಯೊಂದೆ ನನಗೆ ಸರ್ವಸ್ವವೆಂದು ಭಾವಿಸಿದ್ದೆ. ನಾನು ಸಿದ್ಧಗಂಗೆಯಿಂದ ಪಯಣಿಸಲು ಸಿದ್ಧನಾದಾಗ ಕರೆದು ಒಂದು ಕಾವಿ ಪಂಚೆ ಹೊದಿಸಿ ಕಳಿಸಿಕೊಟ್ಟರು. ಇದೆ ನೋಡು ನನ್ನ "ವಜ್ರಕವಚ" ನನ್ನ ಸ್ವಾಮಿತ್ವವನ್ನು ಸರ್ವಕಾಲದಲ್ಲೂ ಪ್ರಕಾಶಪಡಿಸಿದ ದಿವ್ಯ ವಸ್ತ್ರ, ಸರ್ವಸಂಕಷ್ಟದಿಂದ ರಕ್ಷಿಸಿದ ಅಭಯ ವಸ್ತ್ರವೆನ್ನುತ್ತಿದ್ದರು. ಅವರ ಅಂತ್ಯದ ದಿನವರೆಗೆ ಶ್ರೀ ಉದ್ದಾನೇಶ್ವರರ ನೆನಹಿನಲ್ಲೂ ಕಪನಿಯ ಮೇಲೆ ಒಂದು ಕಾವಿವಸ್ತ್ರ ಧರಿಸುತ್ತಿದ್ದು. ಇದು ಶ್ರೀ ಉದ್ದಾನೇಶ್ವರರ ಹಸ್ತಪರುಷಸಿದ್ಧರಾದರೆ ಅವರ ವಾಕ್ ಪರುಷವನ್ನು ಪೂಜ್ಯರ ವಾಣಿಯಲ್ಲಿ ಕೇಳುವುದು ಸೂಕ್ತವೆನಿಸುತ್ತದೆ. "ನಾನು ಓದಿದವನಲ್ಲ. ಸಿದ್ಧಗಂಗೆಯ ಪೂಜ್ಯರಲ್ಲಿ ಆಪ್ತ ಮಿತ್ರನಾಗಿ ಶ್ರೀ ಉದ್ದಾನೇಶ್ವರರ ಸೇವೆಯಲ್ಲಿ ಸುಖವನ್ನು ಕಾಣುತ್ತಿದ್ದವನು. ಆದರೆ ಶ್ರೀ ಉದ್ದಾನೇಶ್ವರರು ಶ್ರೀಮಠಕ್ಕೆ ಯಾರೇ ಹಿರಿಯರು ಬಂದರೆ ಅವರ ಮುಂದೆ ದೇಗುಲ ಮಠದ ಪೂಜ್ಯರನ್ನು ಕರೆಯುತ್ತಿದ್ದರಂತೆ. "ನೋಡಿ ಇವನು ಭಾರಿ ವಿದ್ಯಾವಂತ, ಇವನು ಜವಾನ ಚಾಕರಿಗೂ ಸರಿ, ದಿವಾನ ಚಾಕರಿಗೂ ಸರಿ" ಎನ್ನುತ್ತಿದ್ದರು. ಶ್ರೀ ಉದ್ದಾನೇಶ್ವರರ ವಾಕ್‌ಪರುಷ ಸಿದ್ಧಿಯು ಫಲ "ಸಮಯೋಚಿತ ಮಾತಿನಿಂದ ಸಮಸ್ಯೆಗಳನ್ನು ಪರಿಹರಿಸುವ ವಿದ್ಯೆ ನನ್ನದಾಯಿತು. ಜಂಗಮವೆಂದರೆ "ಜಗತ್ಪಾನ ಸೇವಾ ವೃತ್ತಿಯೆಂಬ ಜವಾನ ಚಾಕರಿ ನನ್ನದಾಯಿತು. "ಜಂಗಮಕ್ಕಿಂತ ಮಿಗಿಲಾದ ಪೂಜ್ಯ ವಸ್ತುವಿಲ್ಲವೆಂಬ ದಿವಾನ ಪದವಿ ನನಗಾಯಿತು, ನಾನೇನು ಮಾಡಲಿಲ್ಲಾ ಶ್ರೀ ಉದ್ದಾನೇಶ್ವರರ ನೆನಹಿನಲ್ಲೂ ಗುರು ಶ್ರೀ ನಿರ್ವಾಣೇಶ್ವರರ ಸೇವೆ ಮಾಡಿದೆ. ದೇಗುಲಮಠದ ದಿವ್ಯಜ್ಯೋತಿ ಬೆಳಕಾಗಿ ನಾಡಿನ ಜನತೆಗೆ ಅನ್ನಜ್ಞಾನಗಳ ದಾಸೋಹ ಮಾಡುವಂತಾದುದು ಉದ್ದಾನೇಶ್ವರರ ವಾಕ್‌ಪುರುಷ, ಪುರುಷಹಸ್ತದ ಫಲ. ದೇಗುಲ ಮಠದ ಲಿಂಗೈಕ್ಯ ಶಿವಯೋಗಿಗಳ ತಪೋನಿಧಿಯ ವಿತರಕನಾಗಿ ನಾನು ದೇಗುಲಮಠದಲ್ಲಿದ್ದೇನೆ. ಮನವು ಸಿದ್ಧಗಂಗೆಯಲ್ಲಿದೆ ಎಂದು ನೂರಾರು ಘಟನೆಗಳ ಮೂಲಕ ಹಲವಾರು ಭಾರಿ ಲೇಖಕನಿಗೆ ತಮ್ಮ ಪ್ರಸಾದ ವಾಣಿಯಲ್ಲಿ ದೇಗುಲ ಪೂಜ್ಯರು ಅನುಗ್ರಹಿಸಿದ್ದಾರೆ, ಶ್ರೀ ಉದ್ದಾನೇಶ್ವರ ಪರುಷ ಹಸ್ತದಲಾದವರೆ ಶರಣರ ತತ್ವಾನುಸರಣೆಯ ದೇಗುಲ ಮಠದ ಪೂಜ್ಯರಿಂದ ಕರ್ನಾಟಕದ ಹಲವು ಮಠಗಳು ಹಲವು ಮನೆಗಳಲ್ಲೂ ಶರಣ ತತ್ವಜ್ಯೋತಿ ಬೆಳಗಿಸಿದ್ದಾರೆ.

ಬಂಡೇಮಠದ ಲಿಂಗೈಕ್ಯ ಶ್ರೀ ಶಿವರುದ್ರ ಸ್ವಾಮಿಗಳು ಶ್ರೀ ಉದ್ದಾನೇಶ್ವರರ ಕರುಣೆಯ ಶಿಶುವೇ ಬಂಡೇಮಠದ ಶ್ರೀಗಳು. ಶ್ರೀ ಉದ್ದಾನಶ್ರೀಗಳ ಸೇವೆಯಲ್ಲಿದ್ದವರೇ. ಒಮ್ಮೆ ಬಂಡೇಮಠದ ಶ್ರೀಗಳು ಶ್ರೀ ಉದ್ದಾನೇಶ್ವರರಿಗೆ ಪ್ರಸಾದ ಎಡೆಮಾಡಿ ತುಮಕೂರಿನಲ್ಲಿ ಸರ್ಪಭೂಷಣ ಮಠದ ಶ್ರೀ ಮಹದೇವ ಸ್ವಾಮಿಗಳ ಶಿವಾನುಭವ ಪ್ರವಚನವಿದೆ ಹೋಗಿ ಬರುತ್ತೇನೆ ಎಂದರು. ಬಂಡೇಮಠದ ಶ್ರೀಗಳ ವಾಣಿಯಲ್ಲಿ "ಲೋ ಅಣ್ಣ ಶಿವಾನುಭವ ಕೇಳಲು ಅಷ್ಟು ದೂರ ಹೋಗಬೇಕಿಲ್ಲ ಆ ಶಿವಾನುಭವ ತಿಳಿಯಲು ಇಲ್ಲಿಯೇ ಕುಳಿತು ಊಟ ಮಾಡು" ಎಂದರಂತೆ. ತಮ್ಮ ಮುಂದೆಯೆ ಕುಳಿತು ಪ್ರಸಾದ ಸ್ವೀಕರಿಸಲು ಬಂಡೇಮಠದ ಶ್ರೀಗಳಿಗೆ ಆದೇಶಿಸಿದರೆ, ಶ್ರೀ ಉದ್ದಾನೇಶ್ವರರ ಆದೇಶದಂತೆ ಪ್ರಸಾದ ಸ್ವೀಕರಿಸುವಾಗ ಬಂಡೇಮಠದ ಶ್ರೀಗಳ ಜಿಹ್ವೆ (ಬಾಯಿ)ಯಿಂದ ಸ್ವಲ್ಪ ಶಬ್ದ ಬರುತ್ತಿರುತ್ತದೆ. ಆಗ ಶ್ರೀ ಉದ್ದಾನೇಶ್ವರರು ನೋಡು ಮೊದಲು ಉಣ್ಣುವುದ ಕಲಿ ಎಲ್ಲಾ ಶಿವಾನುಭವ ಬರುತ್ತದೆ. ನಾನು ಉಣ್ಣುತ್ತಿರುವುದು ಪ್ರಸಾದ ಅದನ್ನು ಸ್ವೀಕರಿಸುವಾಗ ಶಬ್ದ ಬರಬಾರದು ಬಾಯಿಂದ ದ್ರವದ ತುಂತುರು ಆಗಬಾರದು. ಕರದಲ್ಲಿ ಲಿಂಗವೂ ಪೂಜಿಸುವಾಗ ಯಾವ ರೀತಿ ನಿಶ್ಶಬ್ದತೆಯಿಂದ ಮಂತ್ರವನ್ನು ಶ್ವಾಸ (ಉಸಿರಿನ)ದ ಮೂಲಕ ಉಣ್ಣುತ್ತೇವೆಯೇ (ಜಪದಲ್ಲಿ) ಅದೇ ರೀತಿ ಶಿವಸ್ವರೂಪವೇ ಆದ ಪ್ರಸಾದವನ್ನು ಜಿಹ್ವೆಯಲ್ಲಿ ಸ್ವೀಕರಿಸುವಾಗ ಶಬ್ದ ಮಾಡಬಾರದು. ಶಿವನೇ ಏಕಾದಶ ಪ್ರಸಾದ ರೂಪಿನಿಂದ (೧೧ ವಿಧ) ನಿನ್ನ ದೇಹವನ್ನು ವ್ಯಾಪಿಸಿ ನಿನ್ನಲ್ಲೂ ಶಿವತೇಜಸ್ಸನ್ನು ಉಂಟು ಮಾಡುವ ಕಾರಣ ಪ್ರಸಾದವನ್ನು ಶಿವಸ್ವರೂಪದಲ್ಲಿಯೇ ಸ್ವೀಕರಿಸಬೇಕು. ಲಿಂಗವು ಅಂಗದಿಂದ ಅಗಲದಂತೆ ಅವಧಾನವಿರಬೇಕು. ಮನದಿಂದ ಮಂತ್ರ ಮರೆಯಾಗದಂತೆ ಅವಧಾನದಿಂದಿರಬೇಕು. ಪ್ರಸಾದ ಸ್ವೀಕಾರ ಸಮಯದಲ್ಲಿ ಶಿವಭಾವದಿಂದಲೇ ಸ್ವೀಕರಿಸಬೇಕು. ಜೀವ ಭಾವ ಒಂದು ಪದಾರ್ಥ ಭಾವನೆಯಿಂದ ಬೇಕು ಬೇಡೆಂದು ಷಡ್ವಿಜಿಗಳ ಆಸೆಯಲ್ಲಿ ಸ್ವೀಕರಿಸಬಾರದು. ಪ್ರಸಾದವು 'ಸ್ವಯಂಭು' ಸ್ವರೂಪ ಷಡಕ್ಷರ ಸಮರಸವಾದ ಷಡ್ಲಿಂಗಗಳರ್ಪಿತವಾದ ಸರ್ವಾಂಗವನ್ನು ಲಿಂಗ ಕಳೆಯಾಗಿ ಪ್ರಕಾಶಿಸುವ ಸಂಜೀವಿನಿಯಾಗಿದೆ.

ಬಂಡೇಮಠದ ಶ್ರೀಗಳು ಶ್ರೀ ಉದ್ದಾನೇಶ್ವರರಿಂದ ತಿಳಿದ ಈ ಪ್ರಸಾದ ಸ್ವೀಕಾರ ತತ್ತ್ವವನ್ನು ಹಲವು ಬಾರಿ ಹಲವು ವಿಧದಲ್ಲಿ ಲೇಖಕನಲ್ಲಿ ಹೇಳಿದ್ದರು. ಬಂಡೇಮಠದ ಶ್ರೀಗಳು ಶ್ರೀ ಉದ್ದಾನೇಶ್ವರರ ಕರದಲ್ಲಿ ರೂಪುಗೊಂಡ ಚರಜಂಗಮರು ಮಠದ ಮೋಹವಿಲ್ಲದೆ ಭಕ್ತರ ಮನೆಯನ್ನೇ ಮಠಗಳನ್ನಾಗಿಸಿಕೊಂಡು ಅರ್ಚನೆ ಅರ್ಪಣೆ ಮಾಡಿದರು. ಎಲ್ಲಾ ಮಠಗಳ ಶ್ರೀಗಳಲ್ಲೂ ಭೇದವಿಲ್ಲದ ಚರಿಸಿದ ಜಂಗಮ ಮೂರ್ತಿ. ಇವರಿಂದ ಹಲವು ಮನೆಗಳು, ಮಠಗಳು ಬೆಳಕಾದವು. ಬಂಡೇಮಠದ ಶ್ರೀಗಳಿಂದ ಅಸಂಖ್ಯಾತ ಭಕ್ತರು

ಶರಣರ ಪಥವಿಡಿದರು. ಬಂಡೇಮಠದ ಶ್ರೀಗಳು ರೂಪುಗೊಂಡಿದ್ದೇ ಉದ್ದಾನ ಶ್ರೀಗಳ ಕೃಪಾಶೀರ್ವಾದದಲ್ಲಿ. ಉದ್ದಾನೇಶ್ವರ ಸೇವೆಯಲ್ಲಿ ಕಂಡ ಅನೇಕ ಅಲೌಕಿಕ ಲೀಲೆಗಳನು, ಬಂಡೇಮಠದ ಶ್ರೀಗಳು ಲೇಖಕನಲ್ಲಿ ಹೇಳುತ್ತಿದ್ದರು.

ಬಸವಣ್ಣನವರ ಮಹಾಮನೆಯಲ್ಲಿ ಗೊಪ್ಪವಾಗಿದ್ದ ಮರುಳ ಶಂಕರದೇವರಂತೆ ಸಿದ್ಧಗಂಗೆಯಲ್ಲಿ ಎಮ್ಮೆ ಸುಬ್ಬಣ್ಣ ತಾತ ಇದ್ದರು. ಉದ್ದಾನೇಶ್ವರರ ದೃಷ್ಟಿ ಪರುಷದಿಂದ ಅರಳಿದ ಶರಣ ಪುಷ್ಪ. ಶಿಷ್ಯ-ಗುರುವನ್ನು ಪರಿಭಾವಿಸುವ ಪರಿಯನ್ನು ಸುಬ್ಬಣ್ಣ ತಾತನಿಂದ ತಿಳಿಯಬೇಕು. ಸೃಷ್ಟಿಯಲ್ಲೂ ಶಿವನ ದರ್ಶಿಸುವುದನ್ನು ಸುಬ್ಬಣ್ಣ ತಾತನಿಂದ ತಿಳಿಯಬೇಕು. ಶರಣನು ಪರಧನದೊಂದಿಗೆ ವ್ಯವಹರಿಸುವುದನ್ನು ಆಚರಿಸಿ ತೋರಿದವರು ಎಮ್ಮೆ ಸುಬ್ಬಣ್ಣ ತಾತ. ಇಲ್ಲೂ ಉಂಬರೆ ಸಂಗ ಅಲ್ಲಿ ಉಂಬರೆ ಸಂಗ ಎಂದ ಅಣ್ಣನ ವಚನ ಪಾಲಿಸಿದ ಸುಬ್ಬಣ್ಣ ತಾತ ಉದ್ದಾನೇಶ್ವರರ ಕೃಪಾಪಾತ್ರರಾಗಿದ್ದರು.

ಶ್ರೀ ಉದ್ದಾನೇಶ್ವರರು ಸುಬ್ಬಣ್ಣ ತಾತನಿಗೆ ಒಂದು ಕಂಬಳಿಯನ್ನು ಒದೆಯಲು ಕೊಟ್ಟರು. ಗುರು ಹಸ್ತದಿಂದ ಬಂದ ಪರಮ ಪವಿತ್ರ ಕಂಬಳಿ ನನ್ನ ಜೀವನದ ರಕ್ಷಾಕವಚ. ಗುರು ಹಸ್ತದಿಂದ ಬಂದ ಪವಿತ್ರ ಕಂಬಳಿಯು ನನ್ನ ಕಾಲಿಗೆ ತಗಲಬಾರದೆಂದು ಮೊಣಕಾಲಿನ ಮೇಲೆ ಹೊದಿಯುತ್ತಿದ್ದರು. ಗುರುವಿನಿಂದ ದತ್ತವಾದ ವಸ್ತು ಯಾವುದಾದರೂ ನಾವು ಪವಿತ್ರ ಭಾವನೆಯಿಂದಲೇ ಬಹಳ ಎಚ್ಚರದಿಂದ ವ್ಯವಹರಿಸಬೇಕೆಂದು ಸುಬ್ಬಣ್ಣ ತಾತ ಆಚರಿಸಿದವರು. ಎಮ್ಮೆ ಕಾಯಲು ಹೊರಡುವ ತನಕ ಮಠದ ಆವರಣದಲ್ಲಿ ಗಿಡ ಮರಗಳನ್ನು ನೆಟ್ಟು ನೀರುಣಿಸಿ ಬೆಳೆಸುತ್ತಿದ್ದರು. ಆ ಸಮಯದಲ್ಲಿ ಆ ಗಿಡ ಮರಗಳೊಂದಿಗೆ ಸಂಭಾಷಿಸುತ್ತಿದ್ದರು. ನೀನೇಕೆ ಚೆನ್ನಾಗಿ ಬೆಳೆದಿಲ್ಲ ಆ ಮರ ನೋಡು ಹೇಗೆ ಬೆಳೆದಿದೆ, ನಾನು ನಿನಗೆ ಏನು ಕಮ್ಮಿ ಮಾಡಿದ್ದೇನೆ ಎಂದು ಪ್ರಶ್ನಿಸಿ ಮಾತನಾಡುತ್ತಿದ್ದರು. ಈ ರೀತಿ ಬೆಳೆಸಿದ ಮರ ಒಂದನ್ನು ಒಂದು ಕಟ್ಟಡ ಕಟ್ಟಲು ಕಡಿಯಲಾಯಿತು. ಮನೆಯ ಮಗು ಮೃತಪಟ್ಟರೆ ದುಃಖತಪ್ತವಾದಂತೆ ಎರಡು ಮೂರು ದಿನ ಸುಬ್ಬಣ್ಣ ತಾತ ದುಃಖದಲ್ಲಿ ಮುಳುಗಿ ಪ್ರಸಾದ ಸ್ವೀಕರಿಸದೆ ಸಂಕಷ್ಟಪಟ್ಟದನ್ನು ಸಿದ್ಧಗಂಗಾ ಪೂಜ್ಯರೇ ಹೇಳುತ್ತಿರುತ್ತಾರೆ. ಎಮ್ಮೆ ಮೇಯಿಸಲು ಹೋಗುವಾಗ ಮಳೆಗಾಲದಲ್ಲಿ ಕುಂಬಳಕಾಯಿ ಬೀಜಗಳನ್ನು ತೆಗೆದುಕೊಂಡು ಹೋಗಿ ಬೆಟ್ಟದಲ್ಲೆಲ್ಲಾ ಬಿತ್ತುತ್ತಿದ್ದರು. ಕಾಯಿಬಿಟ್ಟಾಗ ಮಠಕ್ಕೆ ತರುತ್ತಿದ್ದರು. ಬೇರೆಯವರು ತೆಗೆದುಕೊಂಡು ಹೋದರೆ ಎಲ್ಲಿ ಉಂಡರೂ ಸಿದ್ಧಲಿಂಗನದೆ ಪ್ರಸಾದ ತೆಗೆದುಕೊಂಡು ಹೋಗಿ ಎನ್ನುತ್ತಿದ್ದರು.

ಸಂಜೆ ಪ್ರಾರ್ಥನಾ ಸಮಯಕ್ಕೆ ಕೈಕಾಲು ಮುಖ ತೊಳೆದು ಭಸ್ಮಧಾರಿಯಾಗಿ ಬಂದು ಶ್ರೀಮಠದ ಮುಂದಿನ ದೀಪಗಳಿಗೆ ಎಣ್ಣೆ ಬತ್ತಿ ಹಾಕಿ ಬೆಳಗಿಸಿ ಸಂಜೆಯ ಪ್ರಾರ್ಥನೆ ಮುಗಿಯುವ ತನಕ ಧ್ಯಾನಸ್ಥರಾಗಿರುತ್ತಿದ್ದರು. ಯಾರನ್ನು ನೋಯಿಸುವ ಮಾತನಾಡದೇ ಬೇರೇನು ಆಶಿಸದೆ ಗುರು ಸೇವೆಯಲ್ಲಿ ಲೋಕದ ಮಣಿಹವ ಪೂರೈಸಿದ ಶರಣ ಸುಬ್ಬಣ್ಣ ತಾತ ಗಿಡಮರಗಳಲ್ಲಿ, ಪ್ರಾಣಿ ಪಕ್ಷಿಗಳಲ್ಲಿ ಶಿವನ ಕಂಡವರು. ಗುರುಮುಟ್ಟಿ ಗುಡ್ಡನಾಗಿ ಗುರುತಿಸಿ ಕೊಂಡವರು. ಒಮ್ಮೆ ಬೆಳ್ಳಿ ನಾಣ್ಯಗಳು ತುಂಬಿದ ಇಮ್ಮಣಿ ಚೀಲ (ಹಿಂದೆ ಸೊಂಟದಲ್ಲಿ ಕಟ್ಟಿಕೊಳ್ಳುತ್ತಿದ್ದ ಹಣದಚೀಲ) ದಾರಿಯಲ್ಲಿ ಸುಬ್ಬಣ್ಣ ತಾತನಿಗೆ ಸಿಕ್ಕಿತು. ಹಿಮ್ಮಣಿಯನ್ನು ಕಂಡ ಸುಬ್ಬಣ್ಣ ತಾತ ಕಾಳಿಂಗ ಸರ್ಪವನ್ನು ಕಂಡಂತೆ ಭಯಭೀತರಾಗಿ ಹಿಮ್ಮಣಿಯನ್ನು ಎರಡು ಬೆರಳುಗಳಿಂದ ಹಿಡಿದುಕೊಂಡು ಸಿದ್ಧಗಂಗೆಯ ಪೂಜ್ಯರ ಪಾದದ ಬಳಿ ಇಟ್ಟು ಬುದ್ಧಿ ನಾನು ಪರಧನ ಮುಟ್ಟಿಬಿಟ್ಟೆ ಎಂದು ಕಣ್ಣೀರ ಧಾರೆ ಆರಿಸುತ್ತಾ ನಿಂತರು. ನಂತರ ಪೂಜ್ಯರು ಅದು ಪರಧನವೆಂದು ಭಾವಿಸಬೇಡ ಶಿವನ ಸೊಮ್ಮು. ಅದನ್ನು ಶಿವನ ಸೇವೆಗೆ ಸಮರ್ಪಿಸಿರುವೆ ಎಂದು ಸಮಾಧಾನಪಡಿಸಿ ಕಳುಹಿಸಿದೆ ಎಂದು ಪೂಜ್ಯರು ನನ್ನ ಬಳಿ ಬಹಳ ಸಲ ಹೇಳುತ್ತಿದ್ದರು.

ಶ್ರೀ ಉದ್ದಾನೇಶ್ವರರ ನಡೆಪರುಷ, ನುಡಿಪರುಷದ ಫಲವಾಗಿ ಸಹಸ್ರಾರು ಭವಿಗಳು ಭಕ್ತರಾದರು. ಶ್ರೀ ಉದಾನೇಶ್ವರರ ಕಾಲದಲ್ಲಿ ಪ್ರಚಾರ ಮಾಧ್ಯಮಗಳಿಲ್ಲದ ಕಾಲ. ಶ್ರೀ ಉದ್ದಾನೇಶ್ವರೇನು ಆಕರ್ಷಣೀಯ ಪ್ರವಚನಕಾರರಲ್ಲ. ಆದರೂ ಶ್ರೀ ಉದ್ದಾನೇಶ್ವರರನ್ನು ದರ್ಶನ ಮಾಡಿದವರಿಗೆಲ್ಲಾ ಭಕ್ತಿಭಾವ ಮೂಡುತ್ತಿತ್ತು. ನಾವು ಗುರುಭಕ್ತರಾಗಬೇಕೆಂಬ ಭಾವನೆಯವರಾಗುತ್ತಿದ್ದರು. ಇದರ ಫಲವಾಗಿಯೇ ತುಮಕೂರು, ಬೆಂಗಳೂರು, ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ಶ್ರೀ ಉದ್ದಾನೇಶ್ವರರನ್ನು ಸ್ಮರಿಸುತ್ತಾ ಸಂಸಾರ ಸಾಗರದಲ್ಲಿ ತೇಲುತ್ತಾ ಸಾಗಿದವರು ಬಹುಮಂದಿ. ನಾನು ಸಂದರ್ಶಿಸಿದ ಹತ್ತಾರು ಗ್ರಾಮಗಳಲ್ಲಿ ಯಾವುದಾದರು ಹಿರಿಯ ಜೀವವಿದ್ದರೆ ಅವರೆಲ್ಲರ ಉದ್ಗಾರ ಒಂದೇ ಶ್ರೀ ಉದ್ದಾನೇಶ್ವರರಿಂದ ನಮ್ಮ ಮನೆ ಬೆಳಗಾಯಿತು ಎಂದು ಮನೆಯ ತಾತಂದಿರು ಒಂದೊಂದು ಶ್ರೀ ಉದ್ದಾನೇಶ್ವರರ ಕತೆ ಹೇಳುತ್ತಿದ್ದರು.

ಹಲವು ಹಳ್ಳಿಗಳಲ್ಲಿ ಭಜನೆಯವರು "ಸಿದ್ಧಗಂಗೆಯೊಳು ಸಿದ್ಧಾಂತನೆನಿಸಿದ ಉದ್ದಾನ ಶಿವಯೋಗಿ" ಎಂಬ ಪಲ್ಲವಿಯೊಂದಿಗೆ ಶ್ರೀ ಉದ್ದಾನೇಶ್ವರರ ಸ್ತುತಿಸುತ್ತಾ ಭಜನೆ ಮಾಡುತ್ತಿದ್ದನ್ನು ಕೇಳಿದ್ದೇನೆ. ಉದ್ದಾನೇಶ್ವರರ ಶಿವಪ್ರಭೆಗೆ





ಒಳಗಾದ ಮೂರುಸಾವಿರ ಭವಿಗಳು ಲಿಂಗದೀಕ್ಷೆ ಬಯಸಿ ಶ್ರೀ ಉದ್ದಾನೇಶ್ವರರಲ್ಲಿ ಬಿನ್ನವಿಸಿಕೊಂಡರು. ಅವರಿಗೆಲ್ಲಾ ಶಿವಗಂಗೆಯ ತಪ್ಪಲಿನ ಕಂಬಾಳು ಮಠದಲ್ಲಿ ವ್ಯವಸ್ಥೆ ಮಾಡಿ ಮೂರು ಸಾವಿರ ಭವಿಗಳನ್ನು ಏಕಕಾಲದಲ್ಲಿ ಭಕ್ತರನ್ನಾಗಿಸಿದರು. ಬಸವಣ್ಣನವರು ಭವಿಗಳ ಭಕ್ತರಾಗಿಸಲು ಧರೆಗೆ ಬಂದ ಮಣಿಹವನ್ನು ಉದ್ದಾನೇಶ್ವರರು ಮುಂದುವರಿಸಿದರು. ಶ್ರೀ ಉದ್ದಾನೇಶ್ವರರ ನಂತರ ಈ ಗುರು ಮಣಿಹವನ್ನು ಇಮ್ಮಡಿ ಮಾಡಿ ಅದೇ ಕಂಬಾಳು ಮಠದಲ್ಲಿ ಶ್ರೀ ಸಿದ್ಧಗಂಗಾ ಪೂಜ್ಯರು ನೆರವೇರಿಸಿದರು.

ಶ್ರೀ ಉದ್ದಾನೇಶ್ವರರ ನುಡಿಪರುಷದ ಅಘಟಿತ ಘಟನೆಗಳು ನೂರಾರು. ಮಹಾತಾಯಿ ಅಕ್ಕಮಹಾದೇವಿ ಯವರು ನಾನು ಅಘಟಿತಘಟಿತದ ಒಲವಿನ ಶಿಶು ಎಂದು ತನ್ನ ಭಾವನೆಯನ್ನು ವಚನದಲ್ಲಿ ದಾಖಲಿಸಿದ್ದಾರೆ. ಶ್ರೀ ಉದ್ದಾನೇಶ್ವರರ ನಡೆ ನುಡಿಗಳಲ್ಲಿ ಲೋಕ ಅಚ್ಚರಿಪಡುವಂತ ಘಟಾನಾವಳಿಗಳು ಸಂಭವಿಸಿ ಭಕ್ತರ ದುರಿತಗಳನ್ನು ದುಃಖ ದುಮ್ಮಾನಗಳನ್ನು ಪರಿಹರಿಸಿವೆ. ಮೈಸೂರು ಸಂಸ್ಥಾನದಲ್ಲಿ ರುದ್ರಪ್ಪನವರೆಂಬ ಮುಖ್ಯ ಇಂಜಿನಿಯರಿದ್ದರು. ಅವರು ಶ್ರೀಮಠದ ಭಕ್ತರು. ಅವರಿಗಿದ್ದ ಒಂದು ಮಗು ಮೃತಪಟ್ಟಿತು. ರುದ್ರಪ್ಪನವರ ಪತ್ನಿ ಬಂದು ಶ್ರೀ ಉದ್ದಾನೇಶ್ವರರಿಗೆ ನಮಿಸಿದರು. ರುದ್ರಪ್ಪನವರ ಪತ್ನಿ ಕಂಬದ ಮರೆಯಲ್ಲಿ ನಿಂತು ಮಗನ ನಿಧನಕ್ಕೆ ದುಃಖಿಸುತ್ತಿದ್ದರು. ಶ್ರೀ ಉದ್ದಾನೇಶ್ವರರು ತಾಯಿಯನ್ನು ಕುರಿತು ಅದೇಕೆ ಅಳುತ್ತೀಯ ಕೊಟ್ಟ ಶಿವ ಕರಕೊಂಡಿದ್ದಾನೆ. ನಿನ್ನ ಮಗನ ಕರೆದುಕೊಂಡ ಅವನೆ ಕೊಡುತ್ತಾನೆ ಹೋಗು ಎಂದರು. ಗುರು ವಾಣಿಯಿಂದ ತಾಯಿ ದುಃಖ ಶಾಂತವಾಯಿತು.

ಆಮೇಲೆ ರುದ್ರಪ್ಪ ದಂಪತಿಯವರಿಗೆ ಜನಿಸಿದವರೇ ಕರ್ನಾಟಕದ ರಾಜಕೀಯದಲ್ಲಿ ಸಜ್ಜನ ರಾಜಕಾರಣಿ ಎಂದು ಹೆಸರಾದ ಶ್ರೀಮತಿ ಕೆ.ಎಸ್. ನಾಗರತ್ನಮ್ಮ ಹಾಗೂ ಅವರ ಸೋದರಿ ವೈದ್ಯೆ ಗುಣಶೀಲ ಇವರುಗಳು. ರುದ್ರಪ್ಪನವರು ಆಗ ಜೋಗ ಜಲಪಾತದ ಬಳಿಯ ವಿದ್ಯುತ್ ಉತ್ಪಾದನ ಘಟಕದ ಪರಿಶೀಲನೆಗೆ ತೆರಳುತ್ತಿದ್ದರು. ಆಗ ಪತ್ನಿ, ಮಕ್ಕಳನ್ನು ಶ್ರೀಮಠದಲ್ಲಿ ಬಿಟ್ಟು ಹೋಗುತ್ತಿದ್ದರು. ಅವರು ಮತ್ತೆ ವಾಪಸ್ಸು ಹೋಗುವಾಗ ಪತ್ನಿ ಮಕ್ಕಳನ್ನು ಕರೆದುಕೊಂಡು ಹೋಗುತ್ತಿದ್ದರು. ಮಕ್ಕಳಾದ ನಮಗೆ ಶ್ರೀಕ್ಷೇತ್ರದಲ್ಲಿರುವುದೆಂದರೆ ಸಡಗಡ ಸಂಭ್ರಮ ಎಂದು ನಾಗರತ್ನಮ್ಮನವರು ಹೇಳುತ್ತಿದ್ದರು. ನಾಗರತ್ನಮ್ಮನವರ ಮಾತೆಯವರ ಇಚ್ಛೆಯಂತೆ ಅಂತ್ಯಕ್ರಿಯೆ ಶ್ರೀಕ್ಷೇತ್ರದಲ್ಲಿಯೇ ನಡೆಯಿತು. ಇಂತಹ ಅನೇಕ ಘಟನಾವಳಿಗಳನ್ನು ಹಲವಾರು ಗ್ರಾಮಗಳಲ್ಲಿ ಅವರ ಮನೆಯಲ್ಲಾದ ಶ್ರೀ ಉದ್ದೇಶನೇಶ್ವರರ ಲೀಲಾವಳಿಗಳನ್ನು ಹೇಳುತ್ತಿರುತ್ತಾರೆ.

ಹರನಿಂದ ನರಜನ್ಮ ಪಡೆದು ಬಂದವರನ್ನು ಶರಣರನ್ನಾಗಿಸುವ ಮಣಿಹದಿ ಅವತರಿಸಿದ ಉದ್ದಾನೇಶ್ವರರು ಶರಣರ ರೂವಾರಿಗಳಾಗಿ ಸಿದ್ಧಗಂಗೆಯಲ್ಲಿ ನೆಲೆಸಿದರು. ಇದರ ಫಲವಾಗಿ ಸಿದ್ಧಗಂಗೆಯು ಕಲ್ಯಾಣ ನಗರಿಯಾಯಿತು.

ಬಸವಣ್ಣನವರು ಕಲ್ಯಾಣದಲ್ಲಿ ನಡೆಸಿದ ದಾಸೋಹ, ಕಾಯಕ, ಲಿಂಗ ಪೂಜಾ ಲೀಲೆಗಳನ್ನು ಕವಿಕಲ್ಪನೆ ಎನ್ನುವ ವಿಚಾರವಾದಿಗಳುಂಟು. ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜನಕ್ಕೆ ದಾಸೋಹ ಮಾಡುವುದುಂಟೆ! ಇದು ಕವಿಯ ಅತಿಶಯೋಕ್ತಿ ಎನ್ನುವುರುಂಟು. ಅಂತವರಿಗೆ ಸಿದ್ಧಗಂಗೆಯಲ್ಲಿ ನಡೆವ ದಾಸೋಹ ಸಂಭ್ರಮವು ಪ್ರತ್ಯಕ್ಷ ಸಾಕ್ಷಿಯಾಗಿದೆ. ಬಸವಣ್ಣನ ಅನ್ನದಾಸೋಹ ಬಸವಣ್ಣನ ನಾಮದ ಬಲದಿಂದ ಸಿದ್ಧಗಂಗೆಯಲ್ಲಿ ಇಮ್ಮಡಿಯಾಗಿ ನಡೆಯುತ್ತಿದೆ. ಮುಂದಿನ ಇತಿಹಾಸಕಾರರು ಅಚ್ಚರಿಪಡುವಂತೆ ಬಸವಣ್ಣನವರ ಅಂದಿನ ಲೀಲೆಗಳು ಇದು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಸಿದ್ಧಗಂಗಾ ಪೂಜ್ಯರ ಮೂಲಕ ಸಾಕಾರವಾಗುತ್ತದೆ. ಇದರ ರೂವಾರಿಗಳು ಶ್ರೀ ಉದ್ದಾನೇಶ್ವರರು ಎಂಬುದು ಸತ್ಯ.

## ಆಧುನಿಕ ವಚನಗಳು

ಹೊರಗೆ ವೇಷದ ಸೊಂಪು
ಒಳಗೆ ರೋಷದ ತತ್ತಿ
ಹೊರಗೆ ಮಂಡೆಯ ಬೋಳು
ಒಳಗೆ ರಂಡೆಯ ಗೀಳು
ಹೊರಗೆ ಈಶ್ವರೋವಾಚದ ನುಡಿ
ಒಳಗೆ ಕಾಮೋವಾಚದ ನಡೆ
ಇಂತು ಒಳಹೊರಗೆ ಸಂದುಳ್ಳವರ
ಮೆಚ್ಚನಯ್ಯಾ ನಮ್ಮ ಗೋಸಲದೇವನು
ಶಿವಗುರು ಶ್ರೀ ಶಿವಕುಮಾರ ಪ್ರಭುವೆ.

* * *

ಉಣ್ಣೆ ಕೆಚ್ಚಲೊಳಿದ್ದು ಉಣ್ಣಬಲ್ಲುದೆ
ನೊರೆವಾಲ ? ಎಂಬರು
ನಿಮ್ಮ ಸನಿಹದೊಳಿದ್ದು ಮುಕ್ತಿ ಪಡೆಯದ
ಮನುಜ ಆ ಉಣ್ಣೆಗಿಂತ ಕರಕಷ್ಟ ನೋಡಾ
ಶಿವಗುರು ಶ್ರೀ ಶಿವಕುಮಾರ ಪ್ರಭುವೆ.

– ಕೋ.ರಂ. ಬಸವರಾಜು
ಶ್ರೀ ಸಿದ್ಧಗಂಗಾ ಮಠ

# ಎಳ್ಳು ಬೆಲ್ಲ ಸವಿಯುವ ಸಮೃದ್ಧಿಯ ಸಂಕೇತ ಸಂಕ್ರಾಂತಿ

– ಯು.ಎನ್. ಸಂಗನಾಳಮಠ *

"ಬಂದಿತು ಸಂಕ್ರಾಂತಿ । ತಂದಿತು ಸುಖಶಾಂತಿ" ಎನ್ನುವ ಕವಿವಾಣಿಯಂತೆ ಜನರಲ್ಲಿ ಉತ್ಸಾಹ, ಉಲ್ಲಾಸ, ಚೈತನ್ಯ, ಸಂತೋಷವನ್ನು ಉಂಟುಮಾಡುತ್ತವೆ. ಮಕರ ಸಂಕ್ರಾಂತಿ ಅಥವಾ ಸಂಕ್ರಮಣ, ವಿಶ್ವಾತ್ಮ, ಜಗದಕಣ್ಣು, ಸೂರ್ಯನ ಪಥ ಬದಲಾವಣೆಗೆ ಸಂಬಂಧಿಸಿದ ಹಬ್ಬ. ದಕ್ಷಿಣಾಯನದಿಂದ ಉತ್ತರಾಯಣಕ್ಕೆ ಚಲಿಸುವ ದಿನವೇ ಮಕರ ಸಂಕ್ರಾಂತಿ. ಇದನ್ನು ಉತ್ತರಾಯಣದ ಪುಣ್ಯಕಾಲ ಎನ್ನುತ್ತಾರೆ. ಸಾಮಾನ್ಯವಾಗಿ ಜನವರಿ ೧೪ ಅಥವಾ ೧೫ನೇ ದಿನದಂದು ಸಂಕ್ರಮಣ. ಸಂಕ್ರಾಂತಿ ಎಂದರೆ ಉಜ್ವಲ ಪ್ರಕಾಶ. ಈ ಸಂದರ್ಭದಲ್ಲಿ ಋತುವಿನಲ್ಲಿ ಪ್ರಮುಖ ಬದಲಾವಣೆಗಳು ಆಗುತ್ತವೆ.

ಭಾರತದಲ್ಲಿ ಸೂರ್ಯನು ಪ್ರತ್ಯಕ್ಷ ದೇವರು. ಚರಾಚರ ವಸ್ತುಗಳ ಆತ್ಮ. ಸೂರ್ಯನಿಂದಲೇ ಸಕಲ ಜೀವಗಳ ಉತ್ಪತ್ತಿ, ಪಾಲನೆ, ಪೋಷಣೆ ಆಗುವದಲ್ಲದೇ ಅಂತಿಮವಾಗಿ ಆತನಲ್ಲಿಯೇ ಲೀನವಾಗುತ್ತವೆ. ಋಗ್ವೇದದಲ್ಲಿ ಸೂರ್ಯನನ್ನು ನಭದ ಸ್ವರ್ಣಾಭರಣ ಎಂದಿದ್ದಾರೆ. ಸೂರ್ಯೋಪಾಸನೆಗೆ ಹೆಚ್ಚಿನ ಪ್ರಾಶಸ್ತ್ಯವಿದೆ. ರೋಗ ನಿವಾರಣೆಗೆ ಅಭೀಷ್ಟಗಳ ಸಿದ್ಧಿಗೆ, ಶಕ್ತಿ ಪ್ರಾಪ್ತಿಗೆ, ಆರೋಗ್ಯ ಸುಧಾರಣೆಗೆ ಸೂರ್ಯ ನಮಸ್ಕಾರಗಳನ್ನು ಮಾಡುತ್ತಾರೆ. ವೈಜ್ಞಾನಿಕ ಸಂಶೋಧನೆಯಿಂದ ಸೌರಶಕ್ತಿಯನ್ನು ಬಳಸಿ ಗೃಹೋಪಯೋಗಿ ಮತ್ತು ಸಾರ್ವತ್ರಿಕ ವಿದ್ಯುತ್ತನ್ನು ಪಡೆಯುತ್ತಿದ್ದಾರೆ. ಮಳೆ-ಬೆಳೆ, ಕತ್ತಲು-ಬೆಳಕು, ರೋಗ-ರುಜಿನ ಪ್ರಕೃತಿಯ ಚೆಲ್ಲಾಟಗಳಿಗೆ ಸೂರ್ಯನೇ ಕಾರಣ.

ಸೂರ್ಯನು ಮಕರ ರಾಶಿಗೆ ಪ್ರವೇಶಿಸಿ ದಕ್ಷಿಣದಿಂದ ಉತ್ತರಾಭಿಮುಖವಾಗಿ, ಆರು ತಿಂಗಳ ಪ್ರಯಾಣ ಬೆಳೆಸುವ ದಿನ ಮಕರ ಸಂಕ್ರಾಂತಿ. ಇದು ಉತ್ತರಾಯಣದ ಪುಣ್ಯಕಾಲ. ಶರಶಯನದಲ್ಲಿ ಮಲಗಿದ ಭೀಷ್ಮರು ಪ್ರಾಣ ತ್ಯಜಿಸಲು ಉತ್ತರಾಯಣದ ಪುಣ್ಯಕಾಲವನ್ನು ಕಾಯುತ್ತಿದ್ದರೆಂದು ಮಹಾಭಾರತದಲ್ಲಿ ಹೇಳಲಾಗಿದೆ. ಒಂದು ರಾಶಿಯಿಂದ ಇನ್ನೊಂದು ರಾಶಿಗೆ ಸೂರ್ಯನ ಪಥ ಸಾಗುತ್ತಲಿರುತ್ತದೆ. ಹಾಗೆ ಹನ್ನೆರಡು ರಾಶಿಗಳಿರುವುದರಿಂದ ಹನ್ನೆರಡು ಸಂಕ್ರಮಣಗಳುಂಟು. ಅದರಲ್ಲಿ ಜನವರಿ ೧೪ರ ಮಕರ ಸಂಕ್ರಮಣ, ಜುಲೈ ೧೬ರ ಕರ್ನಾಟಕ ಸಂಕ್ರಮಣ ಮುಖ್ಯ. ಸಂಕ್ರಾತಿಯ ನಂತರ ಉತ್ತರಾಯಣದಲ್ಲಿ ರಾತ್ರಿ ಕಡಿಮೆ ಆಗಿ ಹಗಲು ಹೆಚ್ಚಾಗುತ್ತದೆ. ಹಾಗೆ ನಮ್ಮ ಜೀವನದಲ್ಲಿ ಸುಖವೂ ಹೆಚ್ಚಾಗುವುದು. ಪುರಾಣದ ಪ್ರಕಾರ ಈ ದಿನದಿಂದ ದೇವತೆಗಳಿಗೆ ಹಗಲು, ರಾಕ್ಷಸರಿಗೆ ರಾತ್ರಿ ಆರಂಭ ಎಂದು ತಿಳಿದುಬರುತ್ತದೆ.

ಡಿಸೆಂಬರ್ ಜನವರಿ ತಿಂಗಳ ಹೇಮಂತ ಶಿಶಿರ ಋತುಗಳ ಚಳಿಗಾಲ. ಚಳಗಾಳಿಯ ಕೊರೆತದಿಂದ ಬರಡಾದ ಜೀವಕ್ಕೆ, ಕೊರಡಾದ ಗಿಡಬಳ್ಳಿಗಳಿಗೆ ನವಚೇತನ ತುಂಬುತ್ತದೆ. ಉತ್ತರಾಯಣದ ಹಿತಕರವಾದ ವಾತಾವರಣ ಪ್ರಕೃತಿಯ ವಿಕಾಸ-ವಿಲಾಸ, ಸುಗ್ಗಿಯ ಹಿಗ್ಗು, ಆರೋಗ್ಯದ ಭಾಗ್ಯ, ದವಸ-ಧಾನ್ಯಗಳ ತುಂಬಿಕೆಯಿಂದ ಈ ಕಾಲ ಸಮೃದ್ಧಿ ಹೊಂದಿರುವ ಕಾಲ.

ಗ್ರಾಮೀಣ ಪ್ರದೇಶದ ಜನರಿಗೆ ಸಂಕ್ರಾಂತಿ ಸಡಗರದ ಹಬ್ಬ. ಹೊಲದಲ್ಲಿ ಬೆಳೆಗಳ ಕಟಾವು ಮುಗಿದು ಮನೆಯಲ್ಲಿನ ಕಣಜ ಧಾನ್ಯ ಲಕ್ಷ್ಮೀಯಿಂದ ತುಂಬಿರುತ್ತದೆ. ಮೈ-ಮನಸ್ಸು ಸುಖ ಶಾಂತಿ, ನೆಮ್ಮದಿಯಿಂದ ತುಂಬಿರುತ್ತವೆ. ಹೊಲದ ದುಡಿಮೆಯಲ್ಲಿ ಸಂಗಾತಿಯಾಗಿ ದುಡಿದ ಎತ್ತುಗಳಿಗೆ ಮೈತೊಳೆದು, ಹೂ-ಬಣ್ಣಗಳಿಂದ ಅಲಂಕಾರ ಮಾಡಿ ಮೆರವಣಿಗೆ ಮಾಡಿ, ಅಕ್ಕಿಬೆಲ್ಲದ ಹುಗ್ಗಿ ಮಾಡಿ ಆರಾಧ್ಯ ದೈವಕ್ಕೆ ಎಡೆ ಮಾಡುವನು.

* ವಿಶ್ರಾಂತ ಉಪನ್ಯಾಸಕರು, 'ಜ್ಯೋತಿರ್ಲಿಂಗ' ಒಂದನೇ ತಿರುವು, ಹೈಸ್ಕೂಲ್ ಬಡಾವಣೆ, ಶಿವಮೊಗ್ಗ ರಸ್ತೆ, ಹೊನ್ನಾಳಿ-೫೭೭೨೧೭, ದಾವಣಗೆರೆ ಜಿಲ್ಲೆ







ರೈತರು ಇದನ್ನು ಸುಗ್ಗಿಹಬ್ಬ ಎಂದು ಕರೆಯುತ್ತಾರೆ. ಉತ್ತರ ಕರ್ನಾಟಕದಲ್ಲಿ 'ಕರಿ ಹಾಯುವುದು" ಎನ್ನುತ್ತಾರೆ.

ಈ ಸಮಯದಲ್ಲಿ ಸಾಧಾರಣವಾಗಿ ಬರುವ ನೆಗಡಿ, ಕೆಮ್ಮು, ಅಸ್ತಮಾ, ಜ್ವರ ಇವುಗಳನ್ನು ಉಪಶಮನ ಮಾಡಲು ಒಂದೆರಡು ಕಾಳುಮೆಣಸು, ಅರಿಶಿನಪುಡಿ, ಬೆಲ್ಲವನ್ನು ಮೂರು ಲೋಟ ನೀರಿಗೆ ಹಾಕಿ ಕುದಿಸಿ, ಅದನ್ನು ಅರ್ಧ ಲೋಟಕ್ಕೆ ಇಳಿಸಿ ಅರ್ಧ ಲೋಟ ಹಾಲನ್ನು ಬೆರೆಸಿ ಕುಡಿಯಬೇಕು ಎಂದು ಆಯುರ್ವೇದ ಪದ್ಧತಿ ಹೇಳುತ್ತದೆ.

ಸಂಕ್ರಾಂತಿ ದಿನದಂದು ಎಳ್ಳು ನೀಡುವುದು, ಎಳ್ಳುಬೆಲ್ಲ ತಿಂದು ಒಳ್ಳೊಳ್ಳೆ ಮಾತನಾಡೋಣ ಎಂದು ಪರಸ್ಪರ ಅಭಿನಂದಿಸುವುದು ವಾಡಿಕೆ. ಇದು ಸ್ನೇಹ ಸಂವರ್ಧನದ ದ್ಯೋತಕ. ಹಿಂದಿನ ತಪ್ಪುಗಳನ್ನು ತಿದ್ದಿ ಮುಂದೆ ನಡೆದುಕೊಳ್ಳುವುದು ಎಂದರ್ಥ.

ಉತ್ತರ ಕರ್ನಾಟಕದಲ್ಲಿ "ಕುಸುರೆಳ್ಳು" ಎಂದು ಕೊಡುತ್ತಾರೆ. ದಕ್ಷಿಣದ ಭಾಗದಲ್ಲಿ ಎಳ್ಳು-ಬೆಲ್ಲ, ಹುರಿಗಡಲೆ, ನೆಲಗಡಲೆ, ಕೊಬ್ಬರಿ ಎಂಬ ಪಂಚದ್ರವ್ಯಗಳ ಮಿಶ್ರಣ ಮಾಡಿ ಕೊಡುತ್ತಾರೆ. ಜೊತೆಗೆ ಸಕ್ಕರೆ ಅಚ್ಚು, ಕಬ್ಬಿನ ತುಂಡನ್ನು ಕೊಡುತ್ತಾರೆ. ಕೆಲವು ಕಡೆ ಬಾಳೆಹಣ್ಣನ್ನು ಕೊಡುತ್ತಾರೆ. ಹೊಸ ಬಟ್ಟೆ ತೊಟ್ಟು, ಆಭರಣಗಳನ್ನು ಧರಿಸಿ ಶೃಂಗಾರವಾಗಿ ಹೆಣ್ಣುಮಕ್ಕಳು ಉತ್ಸಾಹದಿಂದ ನೆರೆಹೊರೆಯವರಿಗೆ ಬಂಧು ಬಾಂಧವರಿಗೆ ಹಂಚಲು ತೆರಳುವ ವೈಭವದ ಸೊಗಸೇ ಸಿರಿ. ಹಿರಿಯರಿಂದ ಆಶೀರ್ವಾದ ಹೊಂದುತ್ತಾರೆ. ಎಳ್ಳು ಬೆಲ್ಲ ಹಂಚುವುದನ್ನು 'ಎಳ್ಳು ಬೀರುವುದು' ಎಂದು ಅನ್ನುತ್ತಾರೆ.

ಎಳ್ಳು ಕಡಲೆ ಬೀಜದಲ್ಲಿ ಕ್ಯಾಲ್ಸಿಯಂ ಮತ್ತು ಬೆಲ್ಲದಲ್ಲಿ ಕಬ್ಬಿಣಾಂಶವು ಹೇರಳವಾಗಿರುವುದರಿಂದ ನಮಗೆ ಅಗತ್ಯವಾದ ಪೋಷಕಾಂಶಗಳು ಎಳ್ಳಿನ ಸೇವನೆಯಿಂದ ದೊರಕುತ್ತವೆ.

ಭಾರತದ ವಿವಿಧ ಕಡೆಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಕರ್ನಾಟಕದಲ್ಲಿ **'ಮಕರ ಸಂಕ್ರಾಂತಿ'**, ತಮಿಳು ನಾಡಿನಲ್ಲಿ **'ಪೊಂಗಲ್'** ಎಂದು, ಕೇರಳದಲ್ಲಿ **'ಮಕರ ವಿಳಕ್ಕು'** ಎಂದು ಕರೆದರೆ, ಆಂಧ್ರ ಪ್ರದೇಶದಲ್ಲಿ **'ಪೆದ್ದಪಂಡುಗ'** ಎಂದು, ಉತ್ತರ ಭಾರತದ ಕೆಲವು ಕಡೆ **'ಖಿಚಡಿ'**, ಬಂಗಾಳದಲ್ಲಿ **'ತಿರುವಾ ಸಂಕ್ರಾಂತಿ'** ಎಂದು ಕರೆದರೆ, ಪಂಜಾಬಿನಲ್ಲಿ **'ಲೋಹರಿ'** ಎಂದು ಕರೆಯುತ್ತಾರೆ. ಪೊಂಗಲ್ ಎಂದರೆ ಹುಗ್ಗಿ. ಹೆಸರುಬೇಳೆ, ಬೆಲ್ಲ, ತುಪ್ಪ ಜೀರ್ಣಕಾರಿಯಾಗಿದೆ. ಇವುಗಳಿಂದ ಕೂಡಿದ ಪೊಂಗಲ್ ಪಚನಕಾರಿ. ತಮಿಳು ನಾಡಿನಲ್ಲಿ ನೆಲ್ಲಿನಿಂದ ಅಕ್ಕಿಯನ್ನು ತೆಗೆದು ಬೇಯಿಸಿ ಕಬ್ಬಿನ ಜಲ್ಲೆಗಳನ್ನಿರಿಸಿ ಪೂಜೆ ಮಾಡುತ್ತಾರೆ. ಹೊಸ ಅಕ್ಕಿಯ ಪೊಂಗಲ್ ಮಾಡಿ ದೇವರಿಗೆ ನೈವೇದ್ಯ ಮಾಡುತ್ತಾರೆ. ಪೊಂಗಲ್ ಎಂದರೆ ಉಕ್ಕುವುದು ಎಂದು ಇನ್ನೊಂದು ಅರ್ಥ. ಅಂಧ್ರದಲ್ಲಿ ಈ ದಿನ ವಿಶೇಷ ರೀತಿಯಲ್ಲಿ ಶ್ರೀರಾಮನ ಪೂಜೆ ಮಾಡುತ್ತಾರೆ. ಈ ದಿನ ರಾಮ ರಾವಣನನ್ನು ಕೊಂದು ಸೀತೆಯನ್ನು ಮರಳಿ ಪಡೆದ ದಿನ ಎಂದು ಭಾವಿಸುತ್ತಾರೆ.

ಸಂಕ್ರಾಂತಿಗೂ ಎಳ್ಳಿಗೂ ನಿಕಟ ಸಂಬಂಧವಿದೆ. ಎಳ್ಳು-ಚಿಗಳಿ, ಎಳ್ಳು-ಬೆಲ್ಲ, ಎಳ್ಳು ಬೆಲ್ಲ ಮಿಶ್ರಣ ಮಾಡಿದ ನೀರು ಇವೆಲ್ಲ ಮಿಶ್ರಣಕ್ಕೆ ಶೀತ-ವಾತಜನ್ಯವಾದ ರೋಗಗಳನ್ನು ನಿವಾರಿಸುವ ಶಕ್ತಿ ಇದೆ.

ನಗರಗಳಲ್ಲಿ ಇತ್ತೀಚೆಗೆ ಸಂಕ್ರಾಂತಿಯ ಆಚರಣೆ ಕಡಿಮೆಯಾಗುತ್ತಿದೆ. ಸಂಕ್ರಾಂತಿಯ ಸ್ವಾರಸ್ಯವನ್ನು ಗ್ರಾಮೀಣ ಪ್ರದೇಶದಲ್ಲಿ ಕಾಣಬಹುದು. ಮನಸ್ಸಿನ ಕಹಿ ಭಾವನೆ ಮರೆತು ಸಿಹಿ ಭಾವನೆಗಳನ್ನು ತುಂಬಿಸಿ ಕೊಳ್ಳುವುದರ ಸಂಕೇತ ಈ ಸಂಕ್ರಾಂತಿ. ಹೆಚ್ಚು ಆಡಂಬರ, ವೆಚ್ಚವಿಲ್ಲದ ಹಬ್ಬ. ಹಬ್ಬದ ನೆಪದಿಂದ ಆರೋಗ್ಯ ಸುಧಾರಣೆಗೆ ದಾರಿ ಮಾಡುತ್ತದೆ. ಮುಂದಿನ ತಲೆಮಾರಿನವರಿಗೆ ಇಂಥ ಹಬ್ಬಗಳು ಕೇವಲ ಕಥೆ ಆಗಬಾರದು.

# ಸಿದ್ಧರಾಮನ ಲೋಕಕಾರುಣ್ಯ

– ಟಿ.ಆರ್. ಮಹಾದೇವಯ್ಯ *

ಶಿವಯೋಗಿ ಸಿದ್ಧರಾಮ ಭೂಮಿಯ ಮಹೇಶ್ವರನೆಂದೇ ಖ್ಯಾತನಾದವನು. ನರತ್ವದಲ್ಲಿ ಹರತ್ವವನ್ನು ಅರಳಿಸಿನಿಂತ ಮಹಾನುಭಾವಿಯಾತ. ಕರ್ಮಯೋಗಿಯಾಗಿದ್ದವ ಶಿವಯೋಗಿಯಾಗಿ ಪರಿಪೂರ್ಣತೆಯತ್ತ ಸಾಗಿದ ಮಹಾಶರಣ. ಆತನನ್ನು ಕುರಿತು ಮಹಾಕಾವ್ಯವನ್ನು ಬರೆದ ಶಿವಕವಿ ರಾಘವಾಂಕ 'ನಟ್ಟ ಕಲ್ಲಲ್ಲ, ಸುಳಿವ ಶಾಸನವೆನ್ನುಂತೆ' ಬಿತ್ತರಿಸಿದ್ದಾನೆ. ಮಹಾಶರಣನ ಕಾರ್ಯಕ್ಷೇತ್ರವು ಕೈಲಾಸಕ್ಕಿಂತ ಮಿಗಿಲೆಂದೂ, ಅದು ಅಷ್ಟಷಷ್ಟಿ ಕ್ಷೇತ್ರಗಳಿಗಿಂತ ಶ್ರೇಷ್ಠವೆಂದೂ ಆತ ಸಾರಿದ್ದಾನೆ. ಪರವಾದಿಗಳಿಗೆ ಹೀಗೆ ಸವಾಲನ್ನು ಹಾಕಿದ್ದಾನೆ :

**ಪೊನ್ನಲಿಗೆ ಕೈಲಾಸವಾ ಜಗದ**
**ಗುರು ಸಿದ್ಧರಾಮನೀಶ್ವರದಲ್ಲಿ ಮೆರೆವ ಗು**
**ಡ್ಡರು ಗಣೇಶ್ವರರಖಿಳ ಜನವಮರರವರ**
**ಸತಿಯರು ರುದ್ರಕನ್ನಿಕೆಯರು.**

**ನೆರೆದ ಶಿವಭವನಂಗಳಷ್ಟ ಷಷ್ಟಿಕ್ಷೇತ್ರ**
**ನಿರುತವೆಂಬೆತ್ತಿದೆನು ಕಯ್ಯನಿದನಲ್ಲೆಂಬ**
**ಪರವಾದಿಯಾದವನ ಶಿರದೊಳಿಳುಹುವೆನೆನ್ನ**
**ವಾಮಪಾದುಕೆಯನು.**

(ಸಿದ್ಧರಾಮ ಚಾರಿತ್ರ್ಯ)

ಈ ಮಹಂತನನ್ನು ಕುರಿತು ಚಾಮರಸ ಕವಿ "ನಿಖಿಳರಿಗೆ ಅರಿವ ಹಂಚಿದ ಅರ್ಥಿಗೆ ಚಿಂತಿತಾರ್ಥ ವನಿತ್ತು ಸಲಹಿದ ಭಾಗ್ಯದಾತ"ನೆಂದು ಕೊಂಡಾಡಿದ್ದಾನೆ.

**ಕಂತುವೆನೆ ಕಂಗೆಡಿಸಿಯೊಳಹೊ**
**ಕ್ಕಂತರಂಗ ವಿಚಾರವೆಲ್ಲವ**
**ಸಂತೆಯಂಗಡಿಯಂತೆ ಸೊನ್ನಲಪುರದೊಳೊಡ್ಡಯಿಸಿ**
**ಚಿಂತಿತಾರ್ಥವನರ್ಥಿಗಿದ್ದು ನಿ**
**ರಂತರಖಿಳರಿಗರಿವನೀವ ಮ**
**ಹಂತನೆನಿಸಿದ ಸಿದ್ಧರಾಮಯ್ಯಂಗೆ ಶರಣಾರ್ಥಿ.**

(ಪ್ರಭುಲಿಂಗಲೀಲೆ)

ಸಿದ್ಧರಾಮ ಅಪೂರ್ವ ವ್ಯಕ್ತಿತ್ವವುಳ್ಳ ಶರಣವರೇಣ್ಯ. ಬಸವಣ್ಣನವರನ್ನು ಬಿಟ್ಟರೆ ಆತನೇ ಅತ್ಯಂತ ಜನಾನುರಾಗಿಯಾದ ಶರಣ. ಸಿದ್ಧರಾಮ ಒಬ್ಬ ಆದರ್ಶ ಸಮಾಜಸೇವಕ. ಅದ್ಭುತ ಸಂಘಟನಾಕಾರ, ಅಸಾಧಾರಣ ಮಾನವತಾವಾದಿ. ಆತನು ಲೋಕೋಪಕಾರಕ ಕೆಲಸಗಳಲ್ಲಿ ಆಸಕ್ತ. ಸಾವಿರಾರು ಜನರನ್ನು ಅಂಥ ಕಾಮಗಾರಿ ಕೆಲಸಗಳಲ್ಲಿ ತೊಡಗಿಸಿ ತಾನೂ ಅವರೊಟ್ಟಿಗೆ ದುಡಿಯುತ್ತಿದ್ದನು. ನಿಜವಾದ ಅರ್ಥದಲ್ಲಿ ಆತ ಕರ್ಮಯೋಗಿ; ಕಾಯಕದ ಕಲಿ. ಇದಕ್ಕೆ ಪ್ರೇರಣೆ ಅವನ ಲೋಕಕಾರುಣ್ಯ ಮತ್ತು ಜೀವಜಂತುಗಳಲ್ಲಿ ಆತನಿಗಿದ್ದ ಅಂತಃಕರಣ.

ಕೆರೆಯಲ್ಲಿನ ತೀರ್ಥ, ಮನದಲ್ಲಿಯ ಸರ್ವಜೀವ ದಯಾಪರತ್ವ ಮೈದೆಗೆದಡೆ ನಿಮ್ಮ ಪಾದ ಸಾಕ್ಷಿ – ಇದು ಸಿದ್ಧರಾಮನ ಘೋಷಣೆ. ಸಕಲ ಜೀವಾವಳಿಯ ಬಗ್ಗೆ ಆತನ ತಳೆದ ಕಳಕಳಿಯು ಪ್ರತೀಕವಿದು. ಸಿದ್ಧರಾಮನಿಗೆ ದೀನದಲಿತರನ್ನು, ಬಡವರನ್ನು, ಶ್ರಮಜೀವಿಗಳನ್ನು ಕಂಡರೆ ವಿಶೇಷ ಒಲವು, ಅನುಕಂಪ. ಅವರ ಊಟವೆಂದರೆ ಅಮೃತ ಸೇವನೆ ಮಾಡಿದಂತೆ ಎಂದಿದ್ದಾನೆ ಆತ :

**ಬಡವರ ಭೋಜನ ಭೋಗಿಸಿದವ**
**ಭವಾನೀಪುತ್ರ ನೋಡಯ್ಯ**
**ಕಡವರ ಎಡೆಗೊಂಡವ ವಿಷ್ಣುವಿನ**
**ವಂಶದವ ನೋಡಯ್ಯ**
**ಬಡವನ ಭೋಜನ ಅಮೃತ ಸೇವನ**
**ಕಡವರನಮೃತ ಸುರಾಪಾನ ನೋಡಾ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಸಿದ್ಧರಾಮ ಬಡವರ ಬಂಧು, ಕೂಲಿ ಕೆಲಸಗಾರರ ನಚ್ಚಿನ ಒಡೆಯನಾದ್ದರಿಂದಲೇ ಅದ್ಭುತ ಸಂಘಟನಕಾರನೆನಿಸಿದ್ದನು. ಯಾವುದೇ ಕೆಲಸಕ್ಕಾಗಲಿ, ಸಾವಿರ ಸಾವಿರ ಜನ ಆತನ ಹಿಂದಿರುತ್ತಿದ್ದರು. ಸಿದ್ಧರಾಮ ಹೀಗೆ ಲೌಕಿಕ ಹಿತಾಸಕ್ತಿಯ ಕೆಲಸದಲ್ಲಿ ಮಗ್ನನಾಗಿ ಜನಪ್ರಿಯ ಮುಖಂಡನಾಗಿ ಇದ್ದಾಗಲೇ ಅಲ್ಲಮಪ್ರಭುದೇವ ಅವನ ಬದುಕಿನ ರಂಗದಲ್ಲಿ ಪ್ರವೇಶಿಸಿದ್ದು ! ಕರ್ಮಯೋಗಿಯೊಬ್ಬ ಒಳಗನರಿಯದೆ ಬಾಹ್ಯ ಚಟುವಟಿಕೆಗಳಲ್ಲಿ ಜೀವನ ಸವೆಸುತ್ತಿದ್ದಾನಲ್ಲಾ ಅವನನ್ನು ಪೂರ್ಣವಾಗಿ ಅಂತರ್ಮುಖಿಯಾಗಿಸಬೇಕಲ್ಲವೆ ? ಎನಿಸಿತು ಅವರಿಗೆ. ಪ್ರಭುದೇವ ಸಿದ್ಧರಾಮನಲ್ಲಿಗೆ ಬಂದು ತಮ್ಮ ಬೆಳಕಿನ ಮಾತುಗಳಿಂದ ಅವನು ಅಂತರ್ಮುಖಿಯಾಗುವಂತೆ ಮಾಡಿದರು :

**"ದೇಹದೊಳಗೆ ದೇವಾಲಯವಿದ್ದು ಮತ್ತೆ ಬೇರೆ**
**ದೇವಾಲಯವೇಕೆ;" ಎಂದೂ**

**"ತನುವೆಂಬ ಏರಿಗೆ ಮನವೆಂಬ ಕಟ್ಟೆಯಮಾಡಿ,**
**ಬಲಿದು ಷಡ್ವಿಧಭಕ್ತಿಯೆಂಬ ಸೋಪಾನದಿಂದ**
**ಪರಮಾನಂದ ಜಲವ ತುಂಬಿ**
**ಕೆರೆಯ ಕಟ್ಟಬಲ್ಲವರಾರನೂ ಕಾಣೆ"**

**"ನಾನು ಕಟ್ಟಿದ ಕೆರೆ ಸ್ಥಿರವಾಯಿತ್ತು."**

ಎಂದೂ ಹೇಳಿ ಬಾಹ್ಯಕ್ರಿಯೆಗಳಿಗಿಂತ ಅಂತರಂಗದ ಕೃಷಿಯ ಕಡೆ ಗಮನ ಸೆಳೆದರು. ಅಷ್ಟೇ ಅಲ್ಲ, ಆತನನ್ನು ಕಲ್ಯಾಣಕ್ಕೆ ಕರೆದೊಯ್ದು ಬಸವಣ್ಣ, ಚೆನ್ನಬಸವಣ್ಣನೇ ಮೊದಲಾದ ಶರಣರ ಸಂಪರ್ಕ ಒದಗುವಂತೆ ಮಾಡಿದರು. ಸಿದ್ಧರಾಮನೇ ಹೇಳುವಂತೆ ಆತ ಕಲ್ಯಾಣದ ಶರಣರಂತೆಯೇ ಆಗಿಬಿಟ್ಟನು: "ಶರಣರ ಇರವ ನೆನೆ ನೆನೆದು ಶರಣ ನಾದೆನಯ್ಯ".

ಶರಣರ ನಡೆ–ನುಡಿಗಳ ಪ್ರಭಾವ ಆತನ ಮೇಲೆ ಎಷ್ಟರ ಮಟ್ಟಿಗಾಯಿತೆಂದರೆ ಕರ್ಮಯೋಗಿಯು ಶಿವಯೋಗಿಯಾಗಿ ಪರಿವರ್ತನೆ ಹೊಂದಿದ. ಇಡೀ ಶರಣ ಸಮುದಾಯವೇ ಈ ಪರಿವರ್ತನೆಯನ್ನು ಕಂಡು ನಲಿದಾಡಿತು; ಕೊಂಡು ತೂನೆದಾಡಿತು.

ಸಿದ್ಧರಾಮನ ಬದುಕಿನಲ್ಲಿ ಒಂದು ಅದ್ಭುತ ಬದಲಾವಣೆ ಕಾಣಿಸಿತು. ಸಹಜವಾಗಿಯೇ ಅದು ಆವನ ಗುಡ್ಡರ ಬದುಕಿನಲ್ಲಿ ಆಗಬೇಕಾಗಿತ್ತು. ಬಾಹ್ಯಕ್ರಿಯೆಗಳಲ್ಲೇ ಅವರು ತೊಡಗಿದ್ದರು. ಅಂತರಂಗದ ಬೆಳವಣಿಗೆ ಮಾತ್ರ ಶೂನ್ಯ. ಕೆರೆಗಳ ನಿರ್ಮಿಸಿ, ಬಾವಿ ತೋಡಿಸಿ, ಬೆಟ್ಟ ಕಡಿಸಿ ಸಮಗೊಳಿಸಿ ಜನರಿಗೆ ಬೇಸಾಯಕ್ಕೆ ಸಜ್ಜುಗೊಳಿಸುವ ಬೆಂಗಾಡು ಸೀಮೆಯಲ್ಲಿ ಹಸಿರು ಮೂಡಿಸಲು ನೆರವಾದ. ಶ್ರಮದಾನದಿಂದ ಬಡವರ ಹಸಿವ ನೀಗಿದ. ಪಶುಪಕ್ಷಿಗಳಿಗೆ ಜೀವನೋಪಾಯ ಕಲ್ಪಿಸಿದ. ನಿರ್ಗತಿಕರಿಗೆ ಹಣ ಸಹಾಯ ಮಾಡಿ ಅವರು ಉದ್ಯೋಗಿಯಾಗಿ ದುಡಿಯುವಂತೆ ಮಾಡಿದ. ಇದರಿಂದಾಗಿ ಅನೇಕ ಕುಟುಂಬಗಳು ನೆಮ್ಮದಿಯಿಂದ ಬಾಳುವಂತಾಯಿತು. ಹೀಗೆ ಹತ್ತು ಹಲವು ವಿಧದಲ್ಲಿ ಲೋಕೋಪಕಾರ ಗೈದ ಸಿದ್ಧರಾಮನು ಲೋಕದ ದೊಡ್ಡ ಸಂಸಾರವನ್ನೇ ಕಟ್ಟಿಕೊಂಡಿದ್ದನು. ಸಹಾಯ ಯಾಚಿಸಿ ಬಂದವರಿಗೆ ಕರುಣೆ ತೋರಿ, ಗೋಳಾಡುತ್ತಾ ಬಂದವರಿಗೆ ಸಮಾಧಾನವನ್ನು ಹೇಳಿ ಸಂತೈಸುತ್ತ ಕರುಣಾಮೂರ್ತಿಯಾಗಿದ್ದನು. ಇಂಥ ಸಿದ್ಧರಾಮನಿಗೆ ಪ್ರಭುವಿನ ದಯೆಯಿಂದ ಸಾಕಾರನಿಷ್ಠೆಯು ಲೌಕಿಕ ನೆಲೆಯಲ್ಲಿ ಫಲವನ್ನು ನೀಡುತ್ತದೆ. ಆದರೆ ಅಂತರಂಗಿಕವಾಗಿ ಆತ್ಮನ ವಿಕಾಸಕ್ಕೆ ಸಹಾಯಕವಾಗುವುದಿಲ್ಲವೆಂಬುದನ್ನು ತಿಳಿದನು. ಇಷ್ಟಲಿಂಗದ ಮಹತ್ವ, ಅದರ ಅನುಸಂಧಾನ ಹೇಗೆ ಮಾನಸಿಕ ಪರಿವರ್ತನೆಗೆ ಕಾರಣವಾಗುತ್ತದೆ ಎಂಬುದನ್ನು ತಿಳಿದ ಸಿದ್ಧರಾಮ ಅದನ್ನು ಹೀಗೆ ಸ್ಮರಿಸಿದ್ದಾನೆ :

*ಕೆರೆ ತೊರೆ ದೇಗುಲಗಳ ಕಡೆಯಿಂದ ನಿಮ್ಮ ಕಂಡೆ*
*ಎಡಹುವ ಕಲ್ಲು ತೆಗೆವ ಮರೆಯಲ್ಲಿ ನಿಧಾನವ ಕಂಡೆ*
*ಎನ್ನ ಮರವೆಯ ತಮದಿ ಅದ್ರಿಗೆ ದಿನಮಣಿ ಜನಿಸಿದಂತೆ*
*ಕಪಿಲಸಿದ್ಧಮಲ್ಲಿಕಾರ್ಜುನ ಅಂಗವೆಂಬ ಭ್ರಾಂತು*
*ಸ್ವಯವಾಯ್ತು ಪ್ರಭುದೇವರ ಕಾರುಣ್ಯದಿಂದ.*

ಒಳ ಅರಿವಿನ ಮಹತ್ವವನ್ನು ಇಷ್ಟಲಿಂಗೋಪಾಸನೆಯ ಅಗತ್ಯವನ್ನು ತನ್ನ ಪ್ರೀತಿಯ ಶಿಷ್ಯ ಸಮೂಹಕ್ಕೆ ತಿಳಿಸಿ ಅವರ ಕಣ್ಣ ತೆರಸಬೇಕೆಂದು ಸಿದ್ಧರಾಮ ಯೋಚಿಸಿದನು. ಕೇವಲ ಬಾಹ್ಯಕ್ರಿಯೆಯಲ್ಲಿ ತೊಡಗಿದ ತನ್ನವರನ್ನು ನೋಡಿದಾಗ ಸಿದ್ಧರಾಮ ತೆಗೆದ ಉದ್ಗಾರ ಇದು :

*ಕೆರೆಯನಗುಳಿಯಗುಳಿ ಗುಡ್ಡರು ತಮ್ಮೆಲುವ ಸಣ್ಣಿಸಿಕೊಂಡರಲ್ಲದೆ*
*ತಮ್ಮ ಮನ ಮರವೆಯನಗಿದಗಿದು ಸಣ್ಣಿಸಲಿಲ್ಲ*
*ಕಲ್ಲುಮಣ್ಣು ಹೊತ್ತುಕೊಂಡು ಗೋಣು ನೋಯಿಸಿಕೊಂಡರಲ್ಲದೆ*
*ಜ್ಞಾನವ ಹೊತ್ತುಕೊಂಡು ಮನವೊಲಯಿಸಿಕೊಳ್ಳಲಿಲ್ಲ ನೋಡಾ*
*ಹೊಲದೋಟವ ಮಾಡಿ ಬಳಲಿದರಲ್ಲದೆ,*
*ಕಪಿಲಸಿದ್ಧಮಲ್ಲಿಕಾರ್ಜುನನ ಪೂಜಿಸಿ ಬಳಲಲಿಲ್ಲ ನೋಡಾ !*

ಸಿದ್ಧರಾಮನ ಈ ಬಗೆಗಿನ ಚಿಂತೆ ಎಷ್ಟು ದೂರ ಹೋಗಿತ್ತೆಂದರೆ ಶರಣರ ಕಾಯಕ ಸಿದ್ಧಾಂತಕ್ಕೆ ಅದು ತಕ್ಕಂತೆ ಸ್ಪಂದಿಸಿತು. ದುಡಿಮೆಯ ಮೂಲಕ ಮೋಕ್ಷ ಕಾಣುವ ತತ್ತ್ವ ಎಳಪಟ್ಟಿತು. ಶಿವಯೋಗಿಯಾದರೂ ಸಹ ಧ್ಯಾನ ಜಪ ತಪಾದಿಗಳಲ್ಲಿ ವ್ಯರ್ಥವಾಗಿ ಕಾಲ್ಲ ಸವೆಸಬಾರದು. ಸಾಧ್ಯವಾದಷ್ಟು ಕಾಯಕ ಮಾಡಬೇಕು. 'ಶಿವಯೋಗಿಯ ದೇಹ ವೃಥಾ ಸವೆಯಲಾಗದು, ಅರ್ಪನಿತು ಸೇವೆ ಮಾಡಲೇಬೇಕು' – ಇದು ಸಿದ್ಧರಾಮನ ಗುರಿ. ಕ್ರಿಯಾಶೀಲ ಬದುಕನ್ನು ಎತ್ತಿ ಹಿಡಿದ ಆತ ಆಂತರಂಗಿಕ ಕೃಷಿಗೂ

* ಪ್ರಸಿದ್ಧ ವಿದ್ವಾಂಸರು, ಬೆಂಗಳೂರು

ಗಮನಕೊಟ್ಟುದು, ಅಂತೆಯೇ ಬೋಧಿಸಿದ್ದು ಆತನ ಬಂಗಾರದ ವ್ಯಕ್ತಿತ್ವಕ್ಕೆ ಪರಿಮಳ ಮೂಡಿದಂತೆ ಆಗಿದೆ.

ಶರಣರ ಸಂಪರ್ಕದಿಂದ ಸಿದ್ಧರಾಮನ ಒಳಗಣ್ಣು ತೆರೆದುದು ಒಂದು ಅದ್ಭುತ ಘಟನೆಯಾದಂತೆಯೇ ಅವನ ವ್ಯಕ್ತಿತ್ವದ ತೇಜಸ್ವಿಯಾದ ಇನ್ನೊಂದು ಮುಖ ಗೋಚರಿಸಿತು. ಸಿದ್ಧರಾಮನಲ್ಲಿ ಅಡಗಿದ್ದ ಕವಿ ಜಾಗೃತನಾದನು. ಬಸವಾದಿ ಶಿವಶರಣರಂತೆಯೇ ಅನುಭಾವಿ ಸಿದ್ಧರಾಮ ಒಳ್ಳೆಯ ವಚನಕಾರನಾದನು. ಕರ್ಮಯೋಗಿ ಸಿದ್ಧರಾಮ ಶಿವಯೋಗಿಯಾದಂತೆಯೇ ವಚನಯೋಗಿಯೂ ಆದನು. ಸಿದ್ಧರಾಮನ ಸಾವಿರಕ್ಕೂ ಹೆಚ್ಚಿನ ವಚನಗಳು ದೊರೆತಿವೆ. ಆತ ಇಂಥ ವಚನಗಳಲ್ಲದೆ ಬಸವಸ್ತೋತ್ರ ತ್ರಿವಿಧಿ, ಮಿಶ್ರಸ್ತೋತ್ರ ತ್ರಿವಿಧಿ, ಅಷ್ಟೋತ್ತರಸ್ತೋತ್ರ ತ್ರಿವಿಧಿ, ಮಂತ್ರಗೋಪ್ಯ ಮೊದಲಾದುವನ್ನು ರಚಿಸಿದ್ದಾನೆ. ಈ ಸಿದ್ಧರಾಮ ಸಾಹಿತ್ಯವು ವಿಚಾರದ ನೆಲೆ, ತಿಳಿವಿನ ನೆಲೆ ಎಂಬ ಅಗ್ಗಳಿಕೆಯನ್ನು ಪಡೆದಿದೆ. ಅವನ ವಚನಗಳಲ್ಲಿ ಅಪೂರ್ವ ವಿಚಾರಗಳು, ಅನುಭಾವಿಕ ನೆಲೆಯ ಚಿಂತನೆಗಳು ತುಂಬಿವೆ. ಅವು ಮತಿಯ ಮಟ್ಟವನ್ನು ಮೀರಿ ಸಮಸ್ತ ಮನುಕುಲದ ಉತ್ಥಾನವನ್ನು ಕುರಿತು ಇವೆ. ಸಿದ್ಧರಾಮನ ವಚನಗಳು ಪಂಡಿತ-ಪಾಮರರಿಬ್ಬರನ್ನೂ ತಲೆತೂಗಿಸುತ್ತವೆ. ಗಡುಚಾದ ವಿಷಯಗಳನ್ನು ಸರಳವಾಗಿ ಸಾಮಾನ್ಯರ ಅನುಭವಕ್ಕೆ ನಿಲುಕುವ ನಿತ್ಯಜೀವನದಿಂದ ಆರಿಸಿದ ದೃಷ್ಟಾಂತಗಳ ಮೂಲಕ ಮನಗಾಣಿಸಿದ್ದಾನೆ. ಶುಷ್ಕವಾದುದನ್ನೂ ರಸದಾಯಿಯಾಗಿ ಹೇಳುವ ಮಾಂತ್ರಿಕ ಶಕ್ತಿ ಅವನ ಮಾತಿಗಿರುವುದನ್ನು ನಾವು ಕಾಣಬಹುದಾಗಿದೆ.

ಸಾಧನೆಯ ಹಾದಿಯಲ್ಲಿ ಬಹು ಎತ್ತರಕ್ಕೆ ಏರಿದ ಸಿದ್ಧರಾಮ ಸಮಷ್ಟಿಚೇತನವನ್ನು ತನ್ನೆತ್ತರಕ್ಕೆ ಏರಿಸಬೇಕೆಂಬ ಹೆಬ್ಬಯಕೆಯಿಂದ ಕೆಳಗಿಳಿದು ಮೊದಲಿನಂತೆಯೇ ಜನ ಸಾಮಾನ್ಯರೊಡನೆ ಬೆರೆತ. ಅಸಾಮಾನ್ಯತೆಗೇರಿದ್ದರೂ ಕೂಡಾ ಆತ ಲೌಕಿಕ ಜನರ ನಾಡಿಯ ಮೇಲೆ ಬೆರಳಿಟ್ಟು ಅದಕ್ಕೆ ಸ್ಪಂದಿಸಿದ್ದಾನೆ. ಹೀಗಾದ್ದರಿಂದಲೇ ಆತನ ಅನೇಕ ವಚನಗಳು ಜನಸಾಮಾನ್ಯರ ಅಲೋಚನೆಗಳಿಗೆ ಮಿಡಿದಿವೆ; ಅವರ ಮುಗ್ಧ ಪ್ರಶ್ನೆಗಳಿಗೆ ಉತ್ತರ ಹೇಳಿವೆ; ಅವರ ಸಮಸ್ಯೆಗಳನ್ನು ಬಿಡಿಸಿವೆ; ನಿರಾಸೆ ಕವಿದ ಅವರ ಮನದಲ್ಲಿ ಆಶಾಜ್ಯೋತಿಯ ಬೆಳಗಿಸಿವೆ. ಸಿದ್ಧರಾಮನು ದೊಡ್ಡವನಾದುದು ಇಂಥ ಸಂವೇದನೆಯಿಂದಲೇ.

ಸಿದ್ಧರಾಮನ ವಚನಗಳು ಮುಮುಕ್ಷುಗಳಿಗೆ ಅಧ್ಯಾತ್ಮ ಸಾರವನ್ನು, ಅಜ್ಞಾನಿಗಳಿಗೆ ಜ್ಞಾನದ ಬೆಳಕನ್ನು, ಅನನುಭವಿಗಳಿಗೆ ಅನುಭವದ ಸಾರಾಯುವನ್ನು, ಸಾಹಿತ್ಯಾಸಕ್ತರಿಗೆ ರಸದುಣಿಸನ್ನು, ಎಲ್ಲಕ್ಕಿಂತ ಮೇಲಾಗಿ ಮಾನವಾಂತಃಕರಣವನ್ನು ಒದಗಿಸುತ್ತವೆ. ಈ ಕಾರಣದಿಂದಲೇ ಶತಮಾನಗಳು ರುಳಿದರೂ ಅವನ ವಚನಗಳು ನವನವೀನವಾಗಿ ಉಳಿದಿವೆ; ಇಂದಿಗೂ ಪ್ರಸ್ತುತವೆನಿಸಿವೆ.

ಅಂಥ ಒಂದೆರಡು ವಚನಗಳನ್ನಾದರೂ ಇಲ್ಲಿ ಉದಾಹರಿಸಬೇಕು :

ವಯ್ಯಕ್ತಿಕ ಬದುಕು ನೀತಿಯುತವೂ ಉದಾತ್ತವೂ ಆಗದೆ ಆತ ಮಾಡುವ ಪೂಜೆಗೆ ಅರ್ಥವಿಲ್ಲ. ಅನ್ಯರಿಗೆ ಉಪಕರಿಸುವವನ, ಒಳ್ಳೆಯದನ್ನು ಹಾರೈಸುವವನ ಬದುಕು ಪರಮಪಾವನ :

*ಒಬ್ಬರ ಮನವ ನೋಯಿಸಿ, ಒಬ್ಬರ ಮನವ ಘಾತವ ಮಾಡಿ*
*ಗಂಗೆಯ ಮುಳುಗಿದಡೇನಾಗುವುದಯ್ಯ ?*
*ಚಂದ್ರನು ಗಂಗೆಯ ತಡಿಯಲ್ಲಿದ್ದಡೇನು ?*
*ಕಲಂಕ ಬಿಡದಾಯಿತ್ತಯ್ಯ*
*ಅದು ಕಾರಣ, ಮನವ ನೋಯಿಸದವನೆ,*
*ಒಬ್ಬರ ಘಾತವ ಮಾಡದವನೆ ಪರಮಪಾವನ*
*ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.*

ಪ್ರತಿಯೊಬ್ಬನಿಗೂ ಸಂಸ್ಕಾರವೆಂಬುದು ಬೇಕು. ಅದಿಲ್ಲದಿದ್ದರೆ ಆತ ಅನಾಗರಿಕ, ಕಾಡು ಮನುಷ್ಯನೆನಿಸುತ್ತಾನೆ; ಅಯೋಗ್ಯನೆನಿಸುತ್ತಾನೆ. ಶಿಲ್ಪಿಯ ಉಳಿಯ ಪೆಟ್ಟಿನ ಸಂಸ್ಕಾರ ಪಡೆದ ಕಲ್ಲು ಆಕಾರ ಹೊಂದಿ ಶಿಲ್ಪವೆನಿಸುತ್ತದೆ; ಪೂಜಾರ್ಹವಾಗುತ್ತದೆ. ಇಲ್ಲದಿದ್ದರೆ ಅದು ನಿಷ್ಪ್ರಯೋಜಕ ಕಲ್ಲೆನಿಸುತ್ತದೆ. ಜಡವಸ್ತುವಾಗಿಯೇ ಉಳಿಯುತ್ತದೆ. ಅದರಂತೆ ಮನುಷ್ಯ ಸಂಸ್ಕಾರವಂತನಾದರೆ ಯೋಗ್ಯನೆನಿಸುತ್ತಾನೆ. ಎಲ್ಲೆಲ್ಲೂ ಸಲ್ಲುವಂಥವನಾಗುತ್ತಾನೆ :

*ಕಟೆದ ಕಲ್ಲು ಲಿಂಗವೆನಿಸಿತು, ಕಟೆಯದ ಕಲ್ಲು ಕಲ್ಲೆನಿಸಿತು,*
*ಪೂಜಿಸಿದ ಮಾನವ ಭಕ್ತನೆನಿಸಿದನು; ಪೂಜಿಸದ ಮಾನವ ಮಾನವನೆನಿಸದನು.*
*ಕಲ್ಲಾದಡೇನು ? ಪೂಜೆಗೆ ಫಲವಾಯಿತ್ತು,*
*ಮಾನವನಾದಡೇನು ? ಭಕ್ತಿಗೆ ಕಾರಣಿಕನಾದನು*
*ಕಲ್ಲು ಲಿಂಗವಲ್ಲ, ಲಿಂಗ ಕಲ್ಲಲ್ಲ ನೋಡಾ,*
*ಕಪಿಲಸಿದ್ಧಮಲ್ಲಿಕಾರ್ಜುನಾ.*

ಸ್ವರ್ಗ-ನರಕಗಳ ಕಲ್ಪನೆ ಮಾನವನ ಜೀವನದಲ್ಲಿ ಅದ್ಭುತ ಪರಿಣಾಮ ಬೀರಿದೆ. ಪಾಪ ಭೀತಿ, ಪುಣ್ಯದಾಸೆ





ಹಾಗೂ ಸ್ವರ್ಗದ ಹುಚ್ಚು ಮನುಷ್ಯನ ನಡವಳಿಕೆಗಳಲ್ಲಿ ಆಗಾಧ ಪರಿಣಾಮಗಳನ್ನು ತಂದುವು. ಆದರೆ 'ಸ್ವರ್ಗವೆಂಬುದು ಬೇರೆಲ್ಲೋ ಇದೆ. ಅಲ್ಲಿಗೆ ನಾನು ಹೋಗಬೇಕು' ಎಂಬ ಗೀಳಿನಲ್ಲಿ ತಾನು ಈ ಲೋಕದಲ್ಲಿ ಮಾಡಬೇಕಾದ ಕೆಲಸಗಳನ್ನು ಮರೆತು, ಲೋಕದ ಜವಾಬ್ದಾರಿಗಳನ್ನು ಮರೆತು ಧ್ಯಾನಾಸಕ್ತನಾಗುವುದು ವಿಪತ್ಕಾರಿ. ಸತ್ತ ಮೇಲೆ ಸ್ವರ್ಗ ಸಿಕ್ಕುತ್ತದೆ ಎನ್ನುವುದಾಗಲೀ, 'ಕೈಲಾಸ'ವೆಂಬುದು ಶಿವನ ನೆಲೆ. ಭಕ್ತಿಯ ಆಚರಣೆಯಿಂದ ತಾನು ಅಲ್ಲಿಗೆ ಹೋಗಬೇಕೆಂದು ಭಾವಿಸುವುದಾಗಲೀ ತಪ್ಪು. ಕೈಲಾಸವಾಗಲೀ, ಸ್ವರ್ಗವಾಗಲೀ ಸತ್ತ ಮೇಲೆ ಸಿಕ್ಕುವಂಥವೆಂಬ ಭ್ರಮೆ ಬೇಡ. ಅವು ಇದ್ದಾಗಲೇ ದೊರಕಿಸಿಕೊಳ್ಳಬೇಕಾದ ವಾಸ್ತವಗಳು. ತಪವ ಮಾಡಿದರೆ ಸ್ವರ್ಗ ಸಿಕ್ಕದು, ನಿರ್ಮಲ ಮನಸ್ಸಿನಿಂದ ಪರೋಪಕಾರ ಬುದ್ಧಿಯಿಂದ, ಸತ್ಯಶುದ್ಧವಾಗಿ ಮಾಡುವ ಕೆಲಸದಿಂದ ದೊರೆಯುವ ಸುಖವೇ ಮೋಕ್ಷ. ಅದು ನಡೆಯುವ ನೆಲೆಯೇ ಕೈಲಾಸ. "ಲಿಂಗದ ಕುರುಹು ತಿಳಿದು ಲಿಂಗಗುಣಂಗಳ ನತಿಗಳೆದು ಲಿಂಗವಾದುವೆ ಸ್ವರ್ಗ ನೋಡಯ್ಯ." ಶರಣ ಮಾರ್ಗದಲ್ಲಿ ನಡೆದು ಲಿಂಗಾಂಗ ಸಾಮರಸ್ಯ ಸಾಧಿಸಿದರೆ ಅದೇ ನಿಜವಾದ ಕೈಲಾಸ. ಅದಕ್ಕೆ ಸಿದ್ಧರಾಮ, ಜನರ ಕಲ್ಪನೆಯ ಕೈಲಾಸಬೆಟ್ಟದ ಬಗ್ಗೆ ವ್ಯಂಗ್ಯವಾಗಿ ಹೀಗೆ ನುಡಿದು ಜನರನ್ನು ಎಚ್ಚರಿಸಿದ್ದಾನೆ :

**ಕೈಲಾಸ ಕೈಲಾಸವೆಂದು**
**ಬಡಿದಾಡುವ ಅಣ್ಣಗಳಿರಾ, ಕೇಳಿರಯ್ಯಾ**
**ಕೈಲಾಸವೆಂಬುದೊಂದು**
**ಭೂಮಿಯೊಳಿರುವ ಹಾಳುಬೆಟ್ಟ,**
**ಅಲ್ಲಿರುವ ಮುನಿಗಳೆಲ್ಲ ಜೀವಗಳ್ಳರು,**
**ಅಲ್ಲಿರ್ದ ಚಂದ್ರಶೇಖರನು ಬಹು ಎಡ್ಡ,**
**ಇದರಾಡಂಬರವೇಕಯ್ಯ ? ಎಮ್ಮ ಪುರಾತನರಿಗೆ**
**ಸದಾಚಾರದಿಂದ ವರ್ತಿಸಿ**
**ಲಿಂಗಾಂಗ ಸಾಮರಸ್ಯವ ತಿಳಿದು**
**ನಿಮ್ಮಪಾದಪದ್ಮದೊಳು ಬಯಲಾದ ಪದವೆ**
**ಕೈಲಾಸವಯ್ಯ ಕಪಿಲ ಸಿದ್ಧಮಲ್ಲಿಕಾರ್ಜುನಾ.**

ಹೀಗೆ ಸಿದ್ಧರಾಮ ತನ್ನ ಉಜ್ವಲ ಬದುಕಿನಿಂದ, ಬೆಳಕಿನ ಮಾತುಗಳಿಂದ ನಮಗಿಂದು ಎಲ್ಲರಿಗೂ ಬೇಕಾದವ ನೆನಿಸಿದ್ದಾನೆ. ಸಾಮಾನ್ಯ ವ್ಯಕ್ತಿಯೂ ಉದಾತ್ತತೆಗೆ ಏರಬಹುದೆಂಬುದಕ್ಕೆ ಆತನ ಬದುಕು ಉತ್ಕೃಷ್ಟ ಉದಾಹರಣೆಯಾಗಿದೆ. ಆತನ ವಚನಗಳು ಆ ದಿಸೆಯಲ್ಲಿ ದಾರಿದೀಪವಾಗಿವೆ.

# ನಡೆದಾಡುವ ದೇವರು



ಸಿದ್ಧಗಂಗೆಯ ಶ್ರೇಷ್ಠ ಸಿದ್ಧರು ನೀವು
ಕಲ್ಮಶವೇ ಇಲ್ಲದಾ ಕಾಂತಿ ಕಳಸವು ನೀವು
ಶುಭ್ರ ಕಾವಿಯನುಟ್ಟ ಪರಿಶುದ್ಧರು ನೀವು
ನಡೆಯಲ್ಲಿ ನುಡಿಯಲ್ಲಿ ಶುದ್ಧೋದಕರು ನೀವು.

ಬುದ್ಧಿಯನು ಹೇಳುವಾ ಬುದ್ಧಿಗಳು ನೀವು
ವಿದ್ಯಾಲಯದೊಳಗಿರುವ ವಿಘ್ನೇಶ್ವರರು ನೀವು
ಸರ್ವಧರ್ಮಗಳ ತಿರುಳ ತಿಳಿದವರು ನೀವು
ಸರ್ವರನು ಪ್ರೀತಿಸುವ ಸಂತರು ನೀವು.

ಹೆತ್ತವರ ಹೊರೆಯನ್ನು ಹೊತ್ತುಕೊಂಡಿರಿ ನೀವು
ಬಾಡುವಾ ಲತೆಗಳಿಗೆ ಜೀವಜಲ ನೀವು
ಸೇವೆಯಲಿ ಮತವನು ಬೆಳೆಸಿದಿರಿ ನೀವು
ಜ್ಞಾನದೇಗುಲವನ್ನಾಗಿ ಬೆಳಗಿದಿರಿ ನೀವು.

ಸರ್ವಮನಗಳ ಗೆದ್ದ ದೇವಮಾನವರು ನೀವು
ತ್ರಿವಿಧ ದಾಸೋಹದ ಜಾತ್ಯಾತೀತರು ನೀವು
ಫಲಪುಷ್ಪ ಧೂಪದೀಪಗಳ ಪೂಜೆ ನಿಜಪೂಜೆಯಲ್ಲ
ತ್ರಿವಿಧ ದಾಸೋಹದ ಮುಂದೆ ಯಾವ ಪೂಜೆಯೂ ಇಲ್ಲ

ನಿಮ ಕೀರ್ತಿ ಸ್ಥಾನವು ಹಿಮಶಿಖರದಲ್ಲಿ
ಎಂದೆಂದು ಅಮರ ಈ ಪೃಥ್ವಿಯಲ್ಲಿ
ಆ ದೇವ ಈ ದೇವ ನಂಬದವ ನಾನು
ನಿಮ್ಮೊಳಗೆ ದೈವವನು ಕಂಡವನು ನಾನು.

ಜಗದೊಳಗೆ ಜನಿಸಿರುವ ಜಂಗಮೋತ್ತಮರು ನೀವು
ಭಕ್ತಿಯಲಿ ಪೊರಮಡುವೆ ಆಶೀರ್ವದಿಸಿ ನೀವು
'ನಡೆದಾಡುವ ದೇವರಿಗೆ' ಇದೋ ನನ್ನ ಭಕ್ತಿ ನಮನ
ನಿಮ್ಮ ದಿವ್ಯಚರಣಕ್ಕೆ ಅರ್ಪಿಸುವೆ ಕಿರುಕವನ.

**– ಕುಣಿಗಲ್ ದಿವಾಕರ್**
ನಂಜುಂಡೇಶ್ವರ ನಿಲಯ
೧ನೇ ಮುಖ್ಯರಸ್ತೆ, ೧ನೇ ಅಡ್ಡರಸ್ತೆ
ಜಯನಗರ ದಕ್ಷಿಣ, ತುಮಕೂರು



# ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರೀಯವರು

- ಎಚ್.ಎಸ್. ಸಿದ್ಧಗಂಗಪ್ಪ *

**ಕೀ**ರ್ತನಕಾರರಾಗಿ, ನಾಡು-ನುಡಿಯ ಪರಿಚಾರಕರಾಗಿ, ಕನ್ನಡಿಗರ ಸಾರ್ವಭೌಮ ಸಂಸ್ಥೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ವಿದ್ವಾಂಸರಾಗಿ, ಸಂಪಾದಕರಾಗಿ, ಭಾರತದ ಅತ್ಯುನ್ನತ ಪ್ರಶಸ್ತಿಗಳಲ್ಲಿ ಒಂದಾದ 'ಪದ್ಮಶ್ರೀ' ಪ್ರಶಸ್ತಿ ಪುರಸ್ಕೃತರಾದ ಬಿ. ಶಿವಮೂರ್ತಿ ಶಾಸ್ತ್ರಿಗಳು ನಾಡು ನುಡಿಗೆ ಸಲ್ಲಿಸಿದ ಸೇವೆ ಅನುಪಮವಾದುದು. ಅವರು ಕರ್ತವ್ಯ ನಿಷ್ಠೆ, ಪ್ರಾಮಾಣಿಕತೆ, ರಾಷ್ಟ್ರಪ್ರೇಮ, ಮಾತೃಭಾಷಾ ಪ್ರೀತಿ ಮೊದಲಾದ ಸದ್ಗುಣಗಳನ್ನು ಮೈಗೂಡಿಸಿಕೊಂಡಿದ್ದರು.



**ಜನನ :** ಹುಟ್ಟಿದ್ದು ಫೆಬ್ರವರಿ ೨೩, ೧೯೦೩. ತಂದೆ ಬಸವಯ್ಯಸ್ವಾಮಿ ಹುಲಿಕುಂಟೆಮಠ, ತಾಯಿ ನೀಲಮ್ಮ. ಹುಟ್ಟಿದ ಊರು ಸಿದ್ಧಗಂಗಾ ಕ್ಷೇತ್ರದ ಅಮೂಲ್ಯ ಸೇವೆಯ ಮೂಲಕ ರಾಷ್ಟ್ರ ಹಾಗೂ ವಿಶ್ವದ ಭೂಪಟದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿರುವ ತುಮಕೂರು. ಹಾಸಿ ಹೊದಿಯುವಷ್ಟು ಬಡತನವಿದ್ದರೂ, ಹೃದಯ ಶ್ರೀಮಂತಿಕೆಗೆ ಬಡತನವಿರಲಿಲ್ಲ. ಆ ದಂಪತಿಗಳಿಗೆ ಬಹಳ ವರ್ಷಗಳಾದರೂ ಮಕ್ಕಳನ್ನು ಪಡೆಯುವ ಭಾಗ್ಯವಿರಲಿಲ್ಲ. ಆ ತಾಯಿ ಹೃದಯ ಮಕ್ಕಳಿಗಾಗಿ ಸದಾ ಮಿಡಿಯುತ್ತಿತ್ತು. "ಕಂದನ ಕೊಡು ಶಿವನೆ, ಬಂಧಾನ ಪಡಲಾರೆ, ಬಂಜೆಂಬ ಶಬ್ದ ಹೊರಲಾರೆ' ಎಂದು ಸದಾ ಕಂಡ ಕಂಡ ದೈವಗಳಿಗೆ ಎರಗುತ್ತಿದ್ದಳು. 'ಬಂಜೆ' ಎಂಬ ಲೋಕ ನಿಂದೆಯಿಂದ ಪಾರು ಮಾಡು ಎಂದು ಕಣ್ಣೀರು ಸುರಿಸುತ್ತಿದ್ದಳು. ಕಡೆಗೆ ಆಕೆಯ ಬಯಕೆ ಕೈಗೂಡಿತು. ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಶ್ರೀ ಕುಪ್ಪೂರ ಗದ್ದಿಗೆ ಮಠದ ಶ್ರೀ ಕುಪ್ಪೂರೇಶ್ವರನ ಅನುಗ್ರಹದಿಂದ ಗಂಡು ಮಗು ಜನಿಸಿತು. ದಪ್ಪಗೆ, ದುಂಡಗೆ ಹೊಂಬಣ್ಣ ಹೊಂದಿದ್ದ ಮುದ್ದು ಮಗುವಿಗೆ 'ಕುಪ್ಪಯ್ಯ' ಎಂದು ನಾಮಕಾರಣ ಮಾಡಿದರಂತೆ.

**ಶಿಕ್ಷಣ-ವೃತ್ತಿ ಜೀವನ :** ಬಾಲಕ ಕುಪ್ಪಯ್ಯ ಸೂಕ್ಷ್ಮಮತಿಯಾಗಿದ್ದು, ಪ್ರತಿಭಾವಂತರಾಗಿದ್ದರೂ. ಅಭಿವ್ಯಕ್ತಿಗೊಳಿಸಲು ಸೂಕ್ತ ವಾತಾವರಣವಿಲ್ಲದೆ ಎಲೆ ಮರೆಯ ಕಾಯಿಯಂತ್ತಿದ್ದರು. ಕಿತ್ತು ತಿನ್ನುವ ಬಡತನ. ತಂದೆ ಶ್ರೀ ಬಸವಯ್ಯ ಸ್ವಾಮಿಗಳು ಕೀರ್ತಿನಕಾರರಾಗಿದ್ದರು. ಜನರು ಕರೆದಲ್ಲಿಗೆ ಹೋಗಿ ಪುರಾಣ ಪುಣ್ಯಕಥೆಗಳನ್ನು ಹೇಳಿ ಅದರಿಂದ ಬಂದ ಅಲ್ಪ ಆದಾಯದಿಂದ ಮಿತವಾಗಿ ಕುಟುಂಬದ ನಿರ್ವಹಣೆ ಮಾಡುತ್ತಿದ್ದರು. ಜವರಾಯನ ಕ್ರೂರದೃಷ್ಟಿ ಇವರ ಕುಟುಂಬದ ಮೇಲೆ ಬಿತ್ತು. ಶ್ರೀ ಬಸವಯ್ಯ ಸ್ವಾಮಿಗಳು ಅಕಾಲ ಮರಣಕ್ಕೆ ತುತ್ತಾದರು. ಯಾವುದೇ ಆದಾಯವಿಲ್ಲದ ಕುಟುಂಬ ಬಡತನದ ಕೆನ್ನಾಲಿಗೆಗೆ ಸಿಲುಕಿತು. ತಾಯಿಯನ್ನು ನೋಡಿಕೊಳ್ಳುವ ಗುರುತರವಾದ ಜವಾಬ್ದಾರಿ ಕುಪ್ಪಯ್ಯನ ಮೇಲೆ ಬಿತ್ತು. ಎದೆಗುಂದದೆ ಕಷ್ಟಗಳ ಮಧ್ಯೆ ಶಿಕ್ಷಣ ಮುಂದುವರಿಸಿ ೧೯೨೩ ರಲ್ಲಿ ಅಪ್ಪರ್ ಸೆಕೆಂಡರಿ

*೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ಲನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧





ಪರೀಕ್ಷೆಯಲ್ಲಿ ತೇರ್ಗಡೆಯಾಗಿ ೧೯೨೪ ರಲ್ಲಿ ಗುಬ್ಬಿಯಲ್ಲಿ ಒಂದು ಇಂಗ್ಲೀಷ್ ಶಾಲೆಯಲ್ಲಿ ಕನ್ನಡ ಶಿಕ್ಷಕರಾಗಿ ವೃತ್ತಿ ಜೀವನವನ್ನು ಪ್ರಾರಂಭಿಸಿದರು.

**ಗಾಂಧೀಜಿ ಪ್ರಭಾವ :** ದೇಶದಲ್ಲೆಲ್ಲಾ ಗಾಂಧೀಜಿಯವರ ನೇತೃತ್ವದಲ್ಲಿ ಸ್ವಾತಂತ್ರ್ಯ ಚಳುವಳಿ ನಡೆಯುತ್ತಿತ್ತು. ಗಾಂಧೀಜಿಯವರು ದೇಶಾದ್ಯಂತ ಮಿಂಚಿನ ಸಂಚಾರ ಮಾಡುತ್ತಾ ಜನರನ್ನು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ಪ್ರೇರೇಪಿಸುತ್ತಿದ್ದರು. ೧೯೨೧ ರಲ್ಲಿ ಗಾಂಧೀಜಿ ತುಮಕೂರಿಗೆ ಬಂದು ಬೃಹತ್ ಸಭೆಯನ್ನುದ್ದೇಶಿಸಿ ಮಾಡಿದ ಭಾಷಣ ಶ್ರೀ ಕುಪ್ಪಯ್ಯನವರ ಮೇಲೆ ಗಾಢವಾದ ಪ್ರಭಾವ ಬೀರಿತು. ನಾನು ರಾಷ್ಟ್ರ ಸೇವೆಯನ್ನು ಯಾವ ರೀತಿಯಲ್ಲಿ ಮಾಡಬಹುದು ಎಂದು ಯೋಚಿಸಿ ಕೊನೆಗೆ ತಂದೆಯವರಿಂದ ಬಂದ ಬಳುವಳಿ ಕೀರ್ತಿನೆ ಕಲೆಯನ್ನು ಆಯ್ಕೆ ಮಾಡಿಕೊಂಡು ಕೀರ್ತನೆಗಳ ಮೂಲಕ ಸ್ವಾತಂತ್ರ್ಯದ ಬಗ್ಗೆ ಜನಜಾಗೃತಿ ಮೂಡಿಸಲು ಪ್ರಾರಂಭಿಸಿದರು.

**ಕುಪ್ಪಯ್ಯ ಶಿವಮೂರ್ತಿ ಶಾಸ್ತ್ರೀಯಾದರು :** ಒಮ್ಮೆ ಶ್ರೀಮದ್ ರಂಭಾಪುರಿ ವೀರಸಿಂಹಾಸನಾಧೀಶ್ವರ ಶ್ರೀ ಶ್ರೀ ಜಗದ್ಗುರು ಶಿವನಾಂದ ದೇಶಿಕೇಂದ್ರ ಮಹಾಸ್ವಾಮಿಗಳವರು ದಯಾಮಾಡಿಸಿದ್ದರು. ಸನ್ನಿಧಿಯವರ ದಸರಾ ದರ್ಬಾರಿನಲ್ಲಿ ಕುಪ್ಪಯ್ಯನವರು ವಿದ್ವತ್‌ಪೂರ್ಣವಾದ ಭಾಷಣ ಕೇಳಿದ ಮೇಲೆ ಜಗದ್ಗುರುಗಳು ಪ್ರೀತಿಯಿಂದ ಹತ್ತಿರಕ್ಕೆ ಕರೆದು 'ಕುಪ್ಪಯ್ಯ' ನಿನಗೆ ಈ ಹೆಸರು ಒಪ್ಪಲ್ಲ... ನೀನು ಪ್ರಕಾಂಡ ಪಂಡಿತ. ಆದುದರಿಂದ ಇಂದು ನಿನಗೆ 'ಶಿವಮೂರ್ತಿ' ಎಂಬುದಾಗಿ ನೂತನ ನಾಮಕರಣ ಮಾಡಿದ್ದೇವೆ. ಅದೇ ಹೆಸರಿನಲ್ಲಿ ನೀನು ಪ್ರಸಿದ್ಧನಾಗು ಎಂದು ಆಶೀರ್ವದಿಸಿ ದರಂತೆ. ಅಂದಿನಿಂದ 'ಕುಪ್ಪಯ್ಯ' ಶಿವಮೂರ್ತಿ ಎಂದು ಜನಪ್ರಿಯರಾದರು. ಮುಂದೆ ಶಿವಮೂರ್ತಿ ಜೊತೆ ಶಾಸ್ತ್ರೀ ಸೇರಿಕೊಂಡು ಶಿವಮೂರ್ತಿ ಶಾಸ್ತ್ರೀಯಾದರು.

**ಕನ್ನಡಾಭಿಮಾನಿ :** ಬಾಲ್ಯದಿಂದಲೂ ನಾಡು-ನುಡಿಯ ಬಗ್ಗೆ ಪ್ರೀತಿ, ಗೌರವ ಅಭಿಮಾನವನ್ನು ಬೆಳೆಸಿಕೊಂಡು ಬಂದಿದ್ದ ಶ್ರೀ ಶಾಸ್ತ್ರೀಯವರು, ಒಮ್ಮೆ ತಾವು ಸೇವೆ ಸಲ್ಲಿಸುತ್ತಿದ್ದ ಕ್ರಿಶ್ಚಿಯನ್ ಶಾಲೆಯ ಪ್ರಾಚಾರ್ಯ ಫಾದರ್ ಬ್ರೈನ್‌ರವರು ಆಗ ತಾನೆ ಇಂಗ್ಲೆಂಡ್‌ನಿಂದ ಬಂದಿದ್ದರು. ಶಾಸ್ತ್ರೀಯವರು ಅವರ ನಿವಾಸಕ್ಕೆ ಹೋಗಿ ಕನ್ನಡ ಕಲಿಸುತ್ತಿದ್ದರು. ಒಂದು ದಿನ ಶಾಸ್ತ್ರೀಯವರು ಗಾಂಧೀಜಿ ಅವರ ಮೇಲಿನ ಭಕ್ತಿ ಗೌರವದಿಂದ ಗಾಂಧೀ ಟೋಪಿ ಹಾಕಿಕೊಂಡು ಪಾಠ ಮಾಡಲು ಹೋಗಿದ್ದರು. ಅವರ ಈ ವೇಷ ನೋಡಿದ ಕೂಡಲೇ ಬ್ರೈನ್ ಅವಾಕ್ಕಾಗಿ, ಕೆಂಡ ಮುಟ್ಟಿದವನಂತೆ ಬೆಚ್ಚಿಬಿದ್ದರು. ಅವರು ಕೂಡಲೆ ಶಾಸ್ತ್ರೀಯವರನ್ನು ಕುರಿತು ಮೊದಲು ತಲೆಯ ಮೇಲಿರುವ ಟೋಪಿ ತೆಗೆ ಎಂದು ಹೇಳಿದಾಗ, ಅವರ ಮಾತನ್ನು ಧಿಕ್ಕರಿಸಿದರು. ಆಗ ಫಾದರ್ 'ಶಾಸ್ತ್ರೀ' ನೀವು ನನಗೆ ಮನೆಯಲ್ಲಿ ಪಾಠಹೇಳಿ ಕೊಡುವ ವ್ಯಕ್ತಿಯಾದರೂ ಶಾಲೆಯಲ್ಲಿ ನನ್ನ ಕೈಕೆಳಗಿನ ನೌಕರ ಎಂಬುದನ್ನು ಮರೆಯಬೇಡ' ಎಂದು ಹೇಳಿದಾಗ, ಶಾಸ್ತ್ರೀಯವರು ಅವರ ಮಾತನ್ನು ನಿರಾಕರಿಸಿದ್ದರಿಂದ ಫಾದರ್ ಕೋಪದಿಂದ 'ಅದು ನಿಮ್ಮ ಅವಿವೇಕ, ನಾಳೆಯಿಂದ ನೀವು ಇದೇ ಉಡುಪು ಧರಿಸಿ ಬರುವುದಾದರೆ, ನನ್ನ ಬಂಗಲೆಗಷ್ಟೇ ಅಲ್ಲ, ಶಾಲೆಗೂ ನಿಮಗೆ ಪ್ರವೇಶ ದೊರಕಲಾರದು' ಎಂದರು. ಸ್ವಾಭಿಮಾನಿಯಾದ ಶಾಸ್ತ್ರೀ ಅವರು ರಾಜೀನಾಮೆ ಪತ್ರವನ್ನು ಅವರ ಮುಂದಿಟ್ಟು ಬರುವೆ ನಮಸ್ಕಾರ ಎಂದು ಹೇಳಿ ಬಂಧಮುಕ್ತರಾಗಿ ಹೊರ ನಡೆದರು.

**ಕುಟುಂಬ :** ೧೯೨೪ ರಲ್ಲಿ ಶ್ರೀಮತಿ ಅನ್ನಪೂರ್ಣಮ್ಮನವರನ್ನು ಕೈಹಿಡಿಯುವುದರ ಮೂಲಕ ದಾಂಪತ್ಯ ಜೀವನಕ್ಕೆ ಪಾದಾರ್ಪಣೆ ಮಾಡಿದರು. ಅವರ ದಾಂಪತ್ಯದ ಪ್ರೀತಿಯ ಕುರುಹಾಗಿ ಗಂಡು ಮಗು ಜನಿಸಿ, ಆ ಮಗು ಬೆಳೆದು ದೊಡ್ಡವರಾಗಿ ಕಾನೂನು ಪದವಿ ಪಡೆದು ಕೋರ್ಟ್‌ನಲ್ಲಿ ನ್ಯಾಯವಾದಿಯಾಗಿ ನೋಟರಿಯಾಗಿ ವೃತ್ತಿಜೀವನವನ್ನು ಪ್ರಾರಂಭಿಸಿದರು. ಅವರೇ ಶ್ರೀ ಎಚ್.ಎಸ್. ರೇಣುಕಾಪ್ರಸಾದ್ ಅವರು. ಬಸವ ಸಮಿತಿಯೂ ಸೇರಿದಂತೆ ಹಲವಾರು ಸಂಘ ಸಂಸ್ಥೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದು, ಇತ್ತೀಚೆಗೆ ದೈವಾಧೀನರಾದರು. ಅವರ ಧರ್ಮಪತ್ನಿ ಶ್ರೀಮತಿ ಲೀಲಾವತಿ ಆರ್. ಪ್ರಸಾದ್ ಅವರು ರಾಜಕೀಯ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ಹೆಸರು ಮಾಡಿದ್ದಾರೆ. ಶ್ರೀಮತಿ ಅನ್ನಪೂರ್ಣಮ್ಮನವರು ಮಾತನಾಡುತ್ತಲೇ ಶಿವನ ಪಾದ ಸೇರಿದರು. ನಂತರ ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀಯವರು ತಮಿಳುನಾಡಿನ ಮಧುರೈ ಜಿಲ್ಲೆಯ ತೆರೈಯೂರಿನ ಶ್ರೀ

ವೀರಯ್ಯನವರ ಹಿರಿಯ ಮಗಳು ಮುದ್ದುವೀರಮ್ಮ ನವರನ್ನು ಪ್ರೀತಿಸಿ, ಬಾಳಸಂಗಾತಿಯನ್ನಾಗಿ ಮಾಡಿಕೊಂಡರು. ಅವರ ಪ್ರೀತಿಯ ಪ್ರತೀಕವಾಗಿ ಗಂಡು ಮಗು ಜನಿಸಿತು. ಆ ಮಗುವೇ ಇಂದು ಕನ್ನಡದ ಪ್ರಸಿದ್ಧ ಕವಿ ಹಾಗೂ ನಾಟಕಕಾರರಾದ ಶ್ರೀ ಎಚ್.ಎಸ್. ಶಿವಪ್ರಕಾಶ್ ಅವರು.

**ಕೀರ್ತನ ಕಲಾ ಕೇಸರಿ :** ಶಿಕ್ಷಕ ವೃತ್ತಿಗೆ ವಿದಾಯ ಹೇಳಿದ ಮೇಲೆ ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸಲು ಕಷ್ಟವಾಯಿತು. ಬಾಲಕರಾಗಿದ್ದಾಗಲೇ ತಮ್ಮ ತಂದೆಯವರಿಂದ ಗಮಕ ವಾಚನವನ್ನು ಚೆನ್ನಾಗಿ ಅಭ್ಯಾಸ ಮಾಡಿ ಕರಗತ ಮಾಡಿಕೊಂಡಿದ್ದರು. ಅವರಿಗೆ ದೈವದತ್ತವಾದ ಕಂಠ ಸಿರಿಯಿತ್ತು. ತಮ್ಮಲ್ಲಿರುವ ಪ್ರತಿಭೆಯನ್ನು ಸೂಕ್ತ ರೀತಿಯಲ್ಲಿ ಬಳಸಿಕೊಳ್ಳುವ ದೃಷ್ಟಿಯಿಂದ ಕೀರ್ತನೆ ಕಲೆಯನ್ನು ಆಯ್ಕೆ ಮಾಡಿಕೊಂಡರು. ಆ ದಿನಗಳಲ್ಲಿ ಕೀರ್ತನೆ ಕಲೆಯನ್ನು ಮೈಗೂಡಿಸಿಕೊಂಡು ಪ್ರಖ್ಯಾತರಾಗಿದ್ದ ಮೈಸೂರು ಶಿವಪ್ಪಶಾಸ್ತ್ರೀಗಳು ಹಾಗೂ ವೀರಪ್ಪ ಶಾಸ್ತ್ರೀಗಳು ತಮ್ಮಲ್ಲಿದ್ದ ಅಸಾಧಾರಣ ಕೀರ್ತನೆ ಕಲೆಯನ್ನು ಶ್ರೀ ಶಿವಮೂರ್ತಿ ಶಾಸ್ತ್ರೀ ಅವರಿಗೆ ಶ್ರದ್ಧಾಪೂರ್ವಕವಾಗಿ ಧಾರೆ ಎರೆದರು. ಅವರು ನೀಡಿದ ಮಾರ್ಗದರ್ಶನ ಶಿವಮೂರ್ತಿ ಶಾಸ್ತ್ರೀ ಅವರಿಗೆ ಶ್ರೀರಕ್ಷೆಯಾಯಿತು. ಶಿವಕಥಾ ಶ್ರವಣ, ಶಿವಕೀರ್ತನೆಗಳನ್ನು ನಡೆಸುವುದರಲ್ಲಿ ಅದ್ವಿತಿಯರೆನಿಸಿದರು. ಅವರು ನಡೆಸಿಕೊಡುವ ಕೀರ್ತನಾ ಕಾರ್ಯಕ್ರಮದಲ್ಲಿ ಅಪಾರ ಸಂಖ್ಯೆಯಲ್ಲಿ ಜನ ಸೇರ ತೊಡಗಿದರು. ಅವರ ಕೀರ್ತನ ಕಲೆ ಮನೆ ಮಾತಾಯಿತು. ಅವರದು ಅಯಸ್ಕಾಂತದಂತೆ ಆಕರ್ಷಿಸುವ ಗಂಭೀರ ವ್ಯಕ್ತಿತ್ವ, ಎಂಥವರಲ್ಲೂ ಭಕ್ತಿ, ಗೌರವ ಮೂಡಿಸುತ್ತಿತ್ತು. ಅವರು ಮಾತನಾಡುತ್ತಿದ್ದರೆ, ಕೀರ್ತನೆ ನಡೆಸಿಕೊಡುತ್ತಿದ್ದರೆ ಸಾಕ್ಷಾತ್ ವಾಗ್ದೇವಿಯೇ ಅವರ ನಾಲಿಗೆಯ ಮೇಲೆ ನರ್ತಿಸುತ್ತಿರುವಂತೆ ಭಾಸವಾಗುತ್ತಿತ್ತು. ಅವರು ನಡೆಸಿಕೊಡುವ ಕಾರ್ಯಕ್ರಮವನ್ನು ಕೇಳಿದವರು ಸರಸ್ವತಿಯ ವರಪುತ್ರರೆಂದೇ ಕರೆಯುತ್ತಿದ್ದರು.

**ಶರಣ ಸಾಹಿತ್ಯ ಮಾಸಪತ್ರಿಕೆ :** ಬಸವಾದಿ ಶರಣರ ಜೀವನ ಮೌಲ್ಯಗಳನ್ನು, ಆದರ್ಶ ಸಿದ್ಧಾಂತವನ್ನು ಜನಸಾಮಾನ್ಯರಿಗೂ ಪರಿಚಯ ಮಾಡಿ ಕೊಡುವ ಘನ ಉದ್ದೇಶದಿಂದ ಶರಣ ಸಾಹಿತ್ಯಕ್ಕೇ ಮೀಸಲಾದ ಶರಣ ಸಾಹಿತ್ಯ ಮಾಸಪತ್ರಿಕೆಯನ್ನು ಹಾಗೂ ಅದೇ ಹೆಸರಿನ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಬಹಳ ವರ್ಷಗಳ ಕಾಲ ಯಶಸ್ವಿಯಾಗಿ ನಡೆಸಿದರು. ಪತ್ರಿಕೆಗಳನ್ನು ತಾವೇ ಸ್ವತಃ ಮುದ್ರಿಸಲು ಸ್ವತಂತ್ರ ಕರ್ನಾಟಕ ಮುದ್ರಣಾಲಯ ಪ್ರಾರಂಭಿಸಿ ಶರಣ ಸಾಹಿತ್ಯ ಕ್ಷೇತ್ರಕ್ಕೆ ವಿಶಿಷ್ಟವಾದ ಸೇವೆಯನ್ನು ಸಲ್ಲಿಸಿದರು.

**ಸಾಹಿತ್ಯ ಕೃಷಿ :** ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀಯವರು ವಾಗ್ಮಿ, ಕೀರ್ತನೆಕಾರರು, ಪತ್ರಿಕಾ ಸಂಪಾದಕರಷ್ಟೇ ಅಲ್ಲ, ಜೊತೆಗೆ ಅಮೂಲ್ಯವಾದ ಗ್ರಂಥಗಳನ್ನು ರಚಿಸಿ ಪ್ರಕಟಿಸಿದರು. ವೀರಶೈವ ಸಾಹಿತ್ಯ, ಕವನ ಸಂಕಲನ, ವೀರಶೈವ ಮಹಾಪುರುಷರ ಜೀವನ ಚರಿತ್ರೆಗಳು, ನಾಟಕ, ಕಂದಪದ್ಯಗಳು ಸೇರಿದಂತೆ ಅನೇಕ ಗ್ರಂಥಗಳು ಅವರ ವಿದ್ವತ್‌ಗೆ ಸಾಕ್ಷಿಯಾಗಿವೆ. ಅವುಗಳಲ್ಲಿ ಕೆಲವನ್ನು ಹೆಸರಿಸುವುದಾದರೆ ವೀರಶೈವ ಸಾಹಿತ್ಯ ಮತ್ತು ಇತಿಹಾಸ. ಭಾಗ ೧ ರಿಂದ ೪ ರವರೆಗೆ, ಕರ್ನಾಟಕ ಸಂದರ್ಶನ, ಭಾಗ ೧ ಮತ್ತು ೨, ದುಂಬಿ ಮತ್ತು ನಾದ (ಕವನ ಸಂಕಲನ), ಸರ್ವಜ್ಞಮೂರ್ತಿ, ಶ್ರೀ ಮಾದೇಶ್ವರ ಚರಿತೆ, ಮಹಾತ್ಮ ಕನಕದಾಸ, ಬಿದನೂರು ಪ್ರಭು ಶಿವಪ್ಪ ನಾಯಕ, ವೀರಶೈವ ಮಹಾಪುರುಷರು-೬೦ ಜೀವನ ಚರಿತ್ರೆಗಳು, ಮಹಾಕವಿ ಷಡಕ್ಷರಿದೇವ, ಮಹಾಕವಿ ಲಕ್ಮೀಶ, ಕರ್ನಾಟಕ ವಿಜಯ (ನಾಟಕ), ಕೆಳದಿರಾಣಿ ಚೆನ್ನಮ್ಮಾಜಿ (ನಾಟಕ), ಹರಿಹರ ಮತ್ತು ರಾಘವಾಂಕ, ಆಕಾಶವಾಣಿಯ ಶಬ್ದಚಿತ್ರಗಳು ಮೊದಲಾದ ಕೃತಿಗಳನ್ನು ರಚಿಸಿ ಲೋಕಾರ್ಪಣೆ ಮಾಡಿದ್ದಾರೆ. 'ಶೂಲಪಾಣಿ' ಕಾವ್ಯನಾಮದ ಮೂಲಕ ಕವನ ಸಂಗ್ರಹಗಳನ್ನು ಹೊರತಂದರು.

**ಸಂಪಾದಿತ ಕೃತಿಗಳು :** ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀಗಳು ಸಂಪಾದನಾ ಕ್ಷೇತ್ರದಲ್ಲಿಯೂ ಕೆಲಸ ಮಾಡಿದ್ದಾರೆ. ಅನೇಕ ಮಹತ್ವದ ಕೃತಿಗಳನ್ನು ಸಂಪಾದಿಸಿ ಕೊಟ್ಟು ಉಪಕರಿಸಿದ್ದಾರೆ. ನಿಜಗುಣರ ಪುರಾತನ ತ್ರಿವಿಧಿ, ರಾಘವಾಂಕನ ವೀರೇಶ ಚರಿತ್ರೆ, ಪಾಲ್ಕುರಿಕೆ ಸೋಮನಾಥನ ಬಸವೋದಾಹರಣಂ (ಸಂಸ್ಕೃತ), ಇದೇ ಕವಿಯ ಕನ್ನಡ ಕೃತಿ ಗಣಸಹಸ್ರನಾಮಾವಳಿ, ಪಾಲ್ಕುರಿಕೆ ಸೋಮನಾಥನ ಶರಣ ಬಸವ ರಗಳೆ (ಕನ್ನಡ), ಘನಲಿಂಗದೇವರ ವಚನಗಳು, ತುರುಗಾಯಿ ರಾಮಣ್ಣನ





ವಚನಗಳು, ರಾಮೇಶ್ವರ ಮುನಿಯ ನ್ಯಾಯಶತಕ (ಸಂಸ್ಕೃತ), ಕನ್ನಡ ಆದಿತ್ಯ ಪುರಾಣ-ಭಾಗ ೧, ಶಾಂತಲಿಂಗ ದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ-ಭಾಗ ೧, ಕೊಂಡುಗುಳಿ ಕೇಶಿರಾಜನ ಷಡಕ್ಷರ ಮಂತ್ರ ಮಹಿಮೆ, ಗುರುಸಿದ್ಧ ಕವಿಯ ಮಾದೇಶ್ವರ ಸಾಂಗತ್ಯ, ಅಷ್ಟಭಾಷಾ, ಕವಿ ಚಂದ್ರಶೇಖರನ 'ಪಂಪಾಸ್ಥಾನ ವರ್ಣನೆ' (ಚಂಪು), ಕನ್ನಡ ಶತಕ ಸಾಹಿತ್ಯ (ಐವರು ಪ್ರಾಚೀನ ಕವಿ ಕೃತಿಗಳು), ಬಸವಲಿಂಗ ನಾಮಾವಳಿ, ಇವುಗಳ ಜೊತೆಗೆ ಬಿಡಿ ಸಂಶೋಧನಾ ಲೇಖನಗಳು, ಹಲವಾರು ವ್ಯಕ್ತಿಚಿತ್ರಗಳು, ಶಾಸನಾಧ್ಯಯನವನ್ನು ಕುರಿತ ಲೇಖನಗಳು ಸೇರಿದಂತೆ ಅನೇಕ ಕೃತಿಗಳನ್ನು ರಚಿಸಿ, ಸಂಪಾದಿಸಿ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆ ನೀಡಿ ಶ್ರೀಮಂತಗೊಳಿಸಿದ್ದಾರೆ.

**ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ :** ನಾಡು-ನುಡಿಯ ಬಗ್ಗೆ ಅಪಾರ ಕಳಕಳಿ, ಗೌರವವನ್ನು ಹೊಂದಿದ್ದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀ ಅವರನ್ನು ಕನ್ನಡಿಗರ ಅಭಿಮಾನದ ಸಂಕೇತವಾದ, ಸಾರ್ವಭೌಮ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷಗಾದಿ ಕೈಬೀಸಿ ಕರೆಯಿತು. ಈಗಿನಂತೆ ಆಗ ಚುನಾವಣೆಯ ಬಿಸಿಯಾಗಲಿ, ರಾಜಕೀಯ ಪ್ರವೇಶವಾಗಲಿ ಇರಲಿಲ್ಲ. ಯಾರು ನಿಜವಾಗಿ ಕನ್ನಡ ಸೇವೆ ಮಾಡಲು ಅರ್ಹತೆ ಹೊಂದಿರುವವರೋ ಅಂಥವರನ್ನು ಅಭಿಮಾನಿಗಳು, ಸಾಹಿತಿಗಳು, ವಿದ್ವಾಂಸರು ಸೇರಿ ಒಮ್ಮತದಿಂದ ಅಧ್ಯಕ್ಷರನ್ನಾಗಿ ಮಾಡಿ ಅವರು ಮಾಡುವ ಕನ್ನಡ ಪರ ಕೆಲಸಗಳಿಗೆ ಬೆಂಗಾವಲಾಗಿ ನಿಂತು ಪ್ರೋತ್ಸಾಹ ನೀಡುತ್ತಿದ್ದರು. ಅವರು ತಮ್ಮ ಅಧಿಕಾರವಧಿಯಲ್ಲಿ ಕನ್ನಡ ನಿಘಂಟು, ಕನ್ನಡ ಕೃತಿಗಳ ಪ್ರಕಟಣೆ ಮೊದಲಾದ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅನುಷ್ಠಾನಗೊಳಿಸಿದರು. ಅವರು ತಮ್ಮ ಅಧಿಕಾರಾವಧಿಯಲ್ಲಿ ಉಡುಪಿ, ಧಾರವಾಡ, ಬಳ್ಳಾರಿ, ಗದಗ, ಬೀದರ್, ಸಿದ್ಧಗಂಗಾ ಮೊದಲಾದ ಕಡೆಗಳಲ್ಲಿ ಯಶಸ್ವಿಯಾಗಿ ಕನ್ನಡ ಸಮ್ಮೇಳನಗಳನ್ನು ನಡೆಸಿದರು. ಮೊತ್ತ ಮೊದಲ ಬಾರಿಗೆ ಸ್ವಪ್ರಯತ್ನದಿಂದ ಸರ್ಕಾರದ ಮನವೊಲಿಸಿ ಹಣ ಬಿಡುಗಡೆ ಮಾಡುವ ವ್ಯವಸ್ಥೆ ಮಾಡಿ ಪರಿಷತ್ತಿನ ಆರ್ಥಿಕ ವ್ಯವಸ್ಥೆಗೆ ಭದ್ರ ಬುನಾದಿ ಹಾಕಿದರು. ತಾವು ಅಧಿಕಾರದಲ್ಲಿ ಇರುವಷ್ಟು ಕಾಲ ಪರಿಷತ್ತಿನಿಂದ ಪ್ರಯಾಣ ವೆಚ್ಚಕ್ಕಾಗಿ ಒಂದು ಪೈಸೆಯನ್ನು ಸ್ವೀಕರಿಸಿದೆ ತಮ್ಮ ಹಣದಿಂದಲೇ ಪರಿಷತ್ತಿಗೆ ಬಂದು ಕೆಲಸವನ್ನು ಮಾಡಿ ಇತರರಿಗೆ ಆದರ್ಶ ಪ್ರಾಯರಾಗಿದ್ದರು.

**ಸಂಘ ಸಂಸ್ಥೆಗಳಲ್ಲಿ :** ಅವರ ಕನ್ನಡ ಸೇವೆ ಕನ್ನಡ ಸಾಹಿತ್ಯ ಪರಿಷತ್ತಿಗಷ್ಟೇ ಸೀಮಿತವಾಗಿರಲಿಲ್ಲ, ಅವರು ಭಾರತೀಯ ವಿದ್ಯಾಭವನ, ಆಕಾಶವಾಣಿ, ಅಖಿಲ ಭಾರತ ವೀರಶೈವ ಮಹಾಸಭಾ, ಗಡಿ ಸಲಹಾ ಸಮಿತಿ ಮೊದಲಾದ ಪ್ರತಿಷ್ಠಿತ ಸಂಘ ಸಂಸ್ಥೆಗಳಲ್ಲಿ ವಿವಿಧ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿ ಆಯಾ ಸ್ಥಾನಗಳಿಗೆ ಘನತೆ ಗೌರವವನ್ನು ತಂದುಕೊಟ್ಟರು. ಅವರು ಪ್ರತಿಯೊಂದು ಕೆಲಸವನ್ನು ಆತ್ಮತೃಪ್ತಿಗಾಗಿ ಮಾಡಿದರು. ಬೇರೆಯವರು ಮೆಚ್ಚಲಿ ಎಂದು ಕೆಲಸ ಮಾಡಲಿಲ್ಲ. ನಾಡಪ್ರೇಮ, ರಾಷ್ಟ್ರಭಕ್ತಿ, ಕಳಕಳಿ, ಬದ್ಧತೆ, ಕ್ರಿಯಾಶೀಲತೆ, ಪ್ರಾಮಾಣಿಕತೆ, ಸಹೃದಯತೆ ಮೊದಲಾದ ಗುಣಗಳು ಅವರೊಂದಿಗೇ ಬೆಳೆದು ಬಂದವು.

**ಪ್ರಶಸ್ತಿ-ಗೌರವ :** ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀಗಳು ನಾಡು-ನುಡಿಗಾಗಿ ಸಲ್ಲಿಸಿದ ಅಹರ್ನಿಶಿ ಸೇವೆಯನ್ನು ಮನಗೊಂಡು ೧೯೬೬ ರಲ್ಲಿ ಭಾರತದ ಅತ್ಯುನ್ನತ ನಾಗರಿಕ ಪ್ರಶಸ್ತಿಗಳಲ್ಲೊಂದಾದ 'ಪದ್ಮಶ್ರೀ' ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಮೈಸೂರಿನ ಮಹಾರಾಜರಾದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಶಾಸ್ತ್ರೀ ಅವರ ಪ್ರತಿಭೆ ಪಾಂಡಿತ್ಯಕ್ಕೆ ಮನಸೋತು, ಮೆಚ್ಚಿಕೊಂಡು 'ಆಸ್ಥಾನ ವಿದ್ವಾನ್', 'ಪಂಡಿತ ರತ್ನ' ಬಿರುದಿತ್ತು ಗೌರವಿಸಿದರು. ೧೯೬೭ ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿಯ ಗೌರವ, ೧೯೬೮ ರಲ್ಲಿ 'ದೇವಗಂಗೆ' ಎಂಬ ಸಂಭಾವನಾ ಗ್ರಂಥ ಸಮರ್ಪಣೆ, ನಾಡಿನ ಅನೇಕ ಮಠ ಮಾನ್ಯಗಳಿಂದ ಸನ್ಮಾನ, ಗೌರವಕ್ಕೆ ಭಾಜರಾಗಿದ್ದರು. ಅವರೆಂದೂ ಕೀರ್ತಿ, ಪ್ರಶಸ್ತಿಯ ಬೆನ್ನು ಬಿದ್ದವರಲ್ಲ. ಅವೇ ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರೀಗಳನ್ನು ಅರಸುತ್ತಾ ಬಂದವು. ಎಪ್ಪತ್ಮೂರು ವಸಂತಗಳ ಬೇವು ಬೆಲ್ಲವನ್ನು ಸಮಚಿತ್ತದಿಂದ ಸವಿದು, ಕನ್ನಡ ಮಾತೆಯ ಪರಿಚಾರಕರಾಗಿ ಪ್ರೀತಿ, ಭಕ್ತಿಯಿಂದ ಸೇವೆ ಸಲ್ಲಿಸಿ ಜನವರಿ ೧೫, ೧೯೭೬ ರಂದು ಶಿವಸಾಯುಜ್ಯ ಹೊಂದಿದರು.

# ಮರೆಯಲಾಗದ ಗಮಕಿ ಊರುಕೆರೆ ಹನುಮಂತರಾಯರು

– ಡಾ. ಆರ್. ಲಕ್ಷ್ಮೀನಾರಾಯಣ *

**ಹಾಡಿದನುಗಮಕಿ**
**ನಾಡು ನಲಿದುದು ರಸದ ಕಡಲಿನಲಿ ಧುಮುಕಿ'**
**(ಪಕ್ಷಿಕಾಶಿ)**

ರಾಷ್ಟ್ರಕವಿ ಕುವೆಂಪು ಅವರು ಪ್ರಖ್ಯಾತ ಗಮಕಿ ಕೃಷ್ಣಗಿರಿಯ ಕೃಷ್ಣರಾಯರನ್ನು ಕುರಿತು ಬರೆದ ಸಾಲುಗಳು ಇವಾದರೂ ಶ್ರೀಮಾನ್ ಊರುಕೆರೆ ಹನುಮಂತರಾಯರಂಥ ಶ್ರೇಷ್ಠ ಗಮಕಿಗಳಿಗೂ ಇವು ಅನ್ವಯವಾಗುತ್ತವೆ. ಭಾರತದ ಹನುಮಂತರಾಯರೆಂದೇ ಹೆಸರಾದ ಊರುಕೆರೆಯ ಹನುಮಂತರಾಯರು ಸುಮಾರು ಐದು ದಶಕಗಳ ಕಾಲ ನಾಡಿನಲ್ಲಿ ಅದರಲ್ಲೂ ಮುಖ್ಯವಾಗಿ ತುಮಕೂರು ಸುತ್ತಮುತ್ತಲ ಊರುಗಳಲ್ಲಿ ಕಾವ್ಯಗಳನ್ನಾಧರಿಸಿದ ಅಸಂಖ್ಯಾತ ಹರಿಕಥೆಗಳನ್ನು ಮಾಡಿದವರು. ಹಾಗೆ ನೋಡಿದರೆ ಅವರು ಅದನ್ನು ಉಪಜೀವನವಾಗಿಯೇ ಮಾಡಿಕೊಂಡಿದ್ದಿರಬೇಕು.

ರಾಯರು ಎತ್ತರದ ಆಳು. ತೀರ ತೆಳುವೂ ಅಲ್ಲದ, ಸ್ಥೂಲವೂ ಅಲ್ಲದ ನೀಳಕಾಯ, ಕೋಲುಮುಖ, ಕೆಂಪುಬಿಳುಪುಗಳ ಸಮ್ಮಿಶ್ರ ಬಣ್ಣ, ಅವರದು ಶಾನುಭೋಗರ ಮನೆತನ. ಅವರ ತಂದೆ ರಂಗಪ್ಪನವರು ಮತ್ತು ಅವರ ಹಿರಿಯಣ್ಣ ಮುದ್ದರಂಗಪ್ಪನವರು ಶಾನುಭೋಗರಾಗಿದ್ದವರು. ಹನುಮಂತರಾಯರ ಪಾಲಿಗೆ ಬಂದದ್ದು ಶಾನುಭೋಗಿಕೆ ಇನಾಮ್ತಿಯ ಜಮೀನಿನಲ್ಲಿ ಮೂರನೇ ಒಂದು ಪಾಲು. ಅದರಲ್ಲಿ ಬರುತ್ತಿದ್ದ ಉತ್ಪತ್ತಿ ವರ್ಷದಲ್ಲಿ ಆರು ತಿಂಗಳ ಜೀವನಕ್ಕೂ ಸಾಕಾಗುತ್ತಿರಲಿಲ್ಲ. ಕಾರಣ, ಬಯಲುಸೀಮೆಯ ಬೇಸಾಯವೇ ಹಾಗೆ; ಮಳೆಯನ್ನಾಶ್ರಯಿಸಿದ್ದು. ಅವರಿಗೆ ಶಾಲಾ ಶಿಕ್ಷಣವಾದದ್ದೇ ಮೂರನೆಯ ತರಗತಿಯವರೆಗೋ, ನಾಲ್ಕನೆಯ ತರಗತಿಯವರೆಗೋ ಅಷ್ಟೇ. ಹಾಗಾಗಿ ಹತ್ತು ಜನರ ತುಂಬು ಸಂಸಾರದ ನಿರ್ವಹಣೆಗೆ ಕಾವ್ಯಾಧಾರಿತ ಹರಿಕಥೆಯನ್ನು ಉಪಜೀವನದ ಮಾರ್ಗವಾಗಿ ಮಾಡಿಕೊಂಡಿದ್ದರು. ಆದರೆ ಅದು ಎಂದೂ ಅವರ ಪಾಲಿಗೆ ವ್ಯವಹಾರದ ಮಾರ್ಗವಾಗಿರಲೇ ಇಲ್ಲ. ಅದರಿಂದ ಅವರಿಗೆ ಜೀವನಕ್ಕೆ ದೊರೆಯುತ್ತಿದ್ದುದು ಲೆಕ್ಕಕ್ಕೇ ಸಿಗದಷ್ಟು ಅಲ್ಪ. ಆದರೆ ಅದರಿಂದ ತಮಗೆ ದೊರೆಯುತ್ತಿದ್ದ ಸಂತೋಷ, ಜನರಿಗೆ ಲಭಿಸುತ್ತಿದ್ದ ಆನಂದ ಇದೇ ಅವರಿಗೆ ಮುಖ್ಯವಾಗಿತ್ತು. ರಾಯರು ಬಡತನವನ್ನೇ ಉಟ್ಟು ಹೊದೆದಿದ್ದರಾದರೂ ಅತ್ಯಂತ ಪ್ರಾಮಾಣಿಕವಾಗಿ ಬದುಕಿದರು. ಅವರಿಗೆ ಬುದ್ಧಿ ಬಂದ ದಿನದಿಂದಲೂ ಕಾಂಗ್ರೆಸ್ ಸಂಸ್ಥೆಯಲ್ಲಿ ದುಡಿದರು. ಕಾಂಗ್ರೆಸ್‌ಗೆ ಅವರು ಆಕರ್ಷಿತರಾದದ್ದು ಗಾಂಧಿಯವರ ವ್ಯಕ್ತಿತ್ವ ಮತ್ತು ದೇಶಪ್ರೇಮದಿಂದ. ಬಹಳಷ್ಟು ವರ್ಷ ಖಾದಿ ಮತ್ತು ಗಾಂಧಿ ಟೋಪಿಯನ್ನು ಬಿಟ್ಟವರೇ ಅಲ್ಲ. ಆಗಿನ ಕಾಂಗ್ರೆಸ್ ಧುರೀಣರಾದ ತಾಳಕೆರೆ ಸುಬ್ರಹ್ಮಣ್ಯಂ, ಚೆನ್ನಿಗರಾಮಯ್ಯನವರು ಇವರೆಲ್ಲರೂ ಅವರಿಗೆ ಆಪ್ತರಾಗಿದ್ದರು. ಆದರೆ ರಾಜಕೀಯವನ್ನೆಂದಿಗೂ ಸ್ವಂತ ಲಾಭಕ್ಕೆ ಬಳಸಿಕೊಳ್ಳುವುದನ್ನು ಕನಸು ಮನಸ್ಸಿನಲ್ಲೂ ಯೋಚಿಸಿದವರಲ್ಲ. ರಾಜಕೀಯ ಸಂತ್ರಸ್ತರ ಪಿಂಚಣಿ ಗಿಟ್ಟಿಸಿಕೊಳ್ಳಲು ಎಂಥೆಂಥವರೋ ಸುಳ್ಳು ಪ್ರಮಾಣಪತ್ರಗಳನ್ನು ಸಲ್ಲಿಸಿ ಅದನ್ನು ಗಿಟ್ಟಿಸಿಕೊಂಡದ್ದನ್ನು ಕೇಳಿದ್ದೇವೆ. ರಾಯರು ಆಗರ್ಭ ಬಡವರೆಂಬುದನ್ನು ಅರಿತಿದ್ದ ಅವರ ಆಪ್ತ ಮಿತ್ರರೊಬ್ಬರು ಪೆನ್‌ಷನ್‌ಗಾಗಿ ಅರ್ಜಿ ಸಿದ್ಧಪಡಿಸಿಕೊಂಡು ಬಂದು ರಾಯರನ್ನು ಸಹಿಹಾಕಲು ಒತ್ತಾಯಿಸಿದಾಗ ರಾಯರು ಬಿಲ್‌ಕುಲ್ ಒಪ್ಪಲಿಲ್ಲ. ಅದಕ್ಕೆ ಅವರು ಕೊಟ್ಟ ಕಾರಣ; ನಾನೇನೂ ಜೈಲಿಗೆ ಹೋಗಿಲ್ಲ. ಸುಳ್ಳು ಸರ್ಟಿಫಿಕೇಟನ್ನು ನಾನೆಂದೂ ಸಲ್ಲಿಸಲಾರೆ ಎಂದು. ಆಗಿನ ಜನರೇ ಹಾಗೆ ಸ್ವಾರ್ಥಕ್ಕಾಗಿ ಸಲ್ಲದ ಸುಳ್ಳು ಹೇಳುವವರಲ್ಲ. ಇಂಥ ಬಡತನದಲ್ಲೇ ಎಂಟು ಜನ ಮಕ್ಕಳ ಸಂಸಾರವನ್ನು ಅದು ಹೇಗೆ ನಿರ್ವಹಿಸಿ ಅವರೆಲ್ಲರಿಗೂ ಸಕಾಲದಲ್ಲಿ ಮದುವೆಗಳನ್ನು ಮಾಡಿ ನೆಲೆಗೊಳಿಸಿದರೋ ಎಂಬುದು ನಿಜಕ್ಕೂ ಸೋಜಿಗ.

ಇದು ರಾಯರ ಲೌಕಿಕ ಜೀವನದ ಚಿತ್ರವಾದರೆ, ಅವರ ಅಲೌಕಿಕವನ್ನಬಹುದಾದ ಬದುಕಿನ ಚಿತ್ರ ಇದಕ್ಕೆ ತೀರಾ ವಿಭಿನ್ನವಾದದ್ದು. ಅದೆಂದರೆ ಸ್ವಾರಸ್ಯದಿಂದ ಕೂಡಿದ ಅವರ ಕಾವ್ಯವಾಚನ. ಕನ್ನಡ ಅತ್ಯಂತ ಜನಪ್ರಿಯವೂ ಶ್ರೇಷ್ಠವೂ ಆದ ಕಾವ್ಯಗಳಿಂದ ಕುಮಾರವ್ಯಾಸ ಭಾರತ, ಜೈಮಿನಿ ಭಾರತ ಮತ್ತು ಹರಿಶ್ಚಂದ್ರಕಾವ್ಯ ಇವೆಲ್ಲವೂ ಅವರಿಗೆ ವಾಚೋವಿಧೇಯವಾಗಿದ್ದವು. ಇವುಗಳನ್ನು ತಿಂಗಳುಗಟ್ಟಲೆ ಕಥೆಗಳಾಗಿ ನೂರಾರು ಊರುಗಳಲ್ಲಿ ಅಕ್ಷರಶಃ ಸಾವಿರಾರು ಸಲ ಮಾಡಿದ್ದಾರೆ. ಅವರ ಕಾವ್ಯವಾಚನದ ರೀತಿ ಶಾಸ್ತ್ರೀಯ ಸಂಗೀತವನ್ನಾಧರಿಸಿದ್ದಲ್ಲ. ಆದರೆ ಪಾತ್ರಗಳ ವ್ಯಕ್ತಿ ಸ್ವಭಾವಕ್ಕನು

*ನಂ. 12, ಶ್ರೀನಿಕೇತನಕ. 2ನೇ ಕ್ರಾಸ್, ಶಿವಾನಂದನಗರ, ಮೂಡಲಪಾಳ್ಯ, ಬೆಂಗಳೂರು–560 072.





ಗುಣವಾದ ತಾಕು, ಧ್ವನಿಯ ಏರಿಳಿತ ಗಳನ್ನಾಧರಿಸಿದ ಧೀರಶೈಲಿಯ ವಾಚನ. ಅವರ ಬಾಯಲ್ಲಿ ಭಾರತದ ಧರ್ಮರಾಯ, ದುರ್ಯೋಧನ, ದುಶ್ಶಾಸನ, ದ್ರೌಪದಿ, ಕೀಚಕ ಮತ್ತು ಉತ್ತರಕುಮಾರಾದಿಗಳು, ಹರಿಶ್ಚಂದ್ರ ಕಾವ್ಯದ ವಿಶ್ವಾಮಿತ್ರ, ವಸಿಷ್ಠ, ಹರಿಶ್ಚಂದ್ರ, ಚಂದ್ರಹಾಸ, ಚಂಡಿ, ಕೃಷ್ಣ, ಇವರೆಲ್ಲ ಜೀವ ತಳೆದು ನಿಲ್ಲುತ್ತಿದ್ದರು. ಗಂಟೆಗಟ್ಟಲೆ, ಕೆಲವೊಮ್ಮೆ ಇಡೀ ರಾತ್ರಿ ಮೈಮರೆತು ಕಥೆಗಳನ್ನು ಮಾಡುತ್ತಿದ್ದರು. ಅವರು ಎಂದೂ ಆ ಕಾವ್ಯಗಳ ಗ್ರಂಥಗಳನ್ನು ಕೈಯಲ್ಲಿ ಹಿಡಿಯಬೇಕಾಗುತ್ತಿರಲಿಲ್ಲ. ಅಷ್ಟರಮಟ್ಟಿಗೆ ಅವುಗಳು ಅವರಿಗೆ ಕಂಠಸ್ಥವಾಗಿದ್ದವು. ನನ್ನದೇ ಒಂದು ಅನುಭವವನ್ನು ಹೇಳಬೇಕೆಂದರೆ ನಾನು ತುಮಕೂರು ಸರ್ಕಾರಿ ಕಾಲೇಜಿನಲ್ಲಿ ಉಪನ್ಯಾಸಕನಾಗಿದ್ದಾಗ ೧೯೭೦ರಲ್ಲೊಮ್ಮೆ ಆಗಿನ ಕನ್ನಡ ಪ್ರಾಧ್ಯಾಪಕ. ಪ್ರೊ. ಸಿ. ಮಹಾದೇವಪ್ಪನವರ ಆಗ್ರಹದ ಮೇರೆಗೆ ಅವರನ್ನು ಕಾವ್ಯವಾಚನಕ್ಕೆ ಕಾಲೇಜಿಗೆ ಕರೆದೊಯ್ದಿದ್ದೆ. ನಾನು ಸುಮ್ಮನೆ ಇರಲೆಂದು ಕುಮಾರವ್ಯಾಸ ಭಾರತದ ಪ್ರತಿ ಕೊಂಡೊಯ್ದಿದ್ದೆ. ಆ ದಿನ ವಾಚನಕ್ಕೆ ಆಯ್ಕೆ ಮಾಡಿಕೊಂಡ ಭಾಗ ದ್ರೌಪದೀ ಸ್ವಯಂವರದ ಭಾಗ. ಪುಸ್ತಕವನ್ನು ನೋಡದೇ, ಅದೇ ಕ್ರಮದಲ್ಲಿ ಒಂದಾದ ಮೇಲೊಂದು ಪದ್ಯಗಳನ್ನು ನಿರರ್ಗಳವಾಗಿ ಹೇಳುತ್ತ, ಮಧ್ಯೆ ನೂರು ಜನ ಕೌರವರ ಹೆಸರುಗಳನ್ನು ಉಸಿರುಗಟ್ಟದಂತೆ ಒಂದೇ ಸಮನೆ ಹೇಳತೊಡಗಿದಾಗ ಇಡೀ ಸಭೆ ಮಂತ್ರಮುಗ್ಧವಾಯಿತು. ಅವರ ಕಂಠವಾದರೂ ಅಷ್ಟೇ; ಕಂಚಿನ ಕಂಠ. ಕಥೆ ಉಪಕಥೆಗಳು, ನಿದರ್ಶನಗಳು, ದೃಷ್ಟಾಂತಗಳು, ಸಾಮತಿಗಳು, ವ್ಯಾಖ್ಯಾನಗಳಿಂದ ನಿಬಿಡವಾಗಿರುತ್ತಿದ್ದ ಅವರ ಕಾವ್ಯಕಥಾ ವಾಚನ ಯಾವಾಗಲೂ ರಸಸ್ವಾದಿಯಾಗಿರುತ್ತಿತ್ತು. ಆ ಕಾರಣದಿಂದಲೇ ಸುಮಾರು ಐದು ದಶಕಕ್ಕೂ ಮೀರಿದ ಕಾಲಾವಧಿಯ ಅವರ ಕಾವ್ಯವಾಚನ ಜನರ ಮೇಲೆ ಮೋಡಿ ಮಾಡುತ್ತಿತ್ತು. ಅವರ ಅತ್ಯಂತ ಆತ್ಮೀಯ ಶಿಷ್ಯರೂ ಮೋಡಿ ಮಾಡುತ್ತಿತ್ತು. ಅವರ ಅತ್ಯಂತ ಆತ್ಮೀಯ ಶಿಷ್ಯರೂ ಸುಮಾರು ನಲವತ್ತು ವರ್ಷ ಅವರ ಒಡನಾಡಿಗಳೂ ಆಗಿದ್ದ ಹರಿಕಥಾ ಪ್ರವೀಣ ಊರುಕೆರೆಯ ಶ್ರೀ ಕೋದಂಡರಾಮಯ್ಯನವರನ್ನು ಹನುಮಂತರಾಯರ ಕಥಾರೀತಿಯ ಬಗ್ಗೆ ಕೇಳಿದರೆ, ಅವರು ಭಾವುಕರಾಗಿ ಬಿಡುತ್ತಾರೆ. ಅವರು ಹೇಳುವಂತೆ ರಾಯರು 'ಸುಂದರಕಾಂಡ' ನಾಟಕದಲ್ಲಿ ಹನುಮಂತನ ಪಾತ್ರ ವಹಿಸಿದ್ದರಂತೆ. ಅವರು ಹೇಳುವುದೊಂದೇ –

**ಗುರವೋ ಬಹವಸ್ಸಂತಿ ಶಿಷ್ಯವಿತ್ತಾಪಹಾರಕಾಃ ದುರ್ಲಭಃ ಸುಗುರುಃ ಲೋಕೇ ಶಿಷ್ಯಚಿತ್ತಾಪಹಾರಕಃ ।**

(ಶಿಷ್ಯರ ವಿತ್ತವನ್ನಪಹರಿಸುವ ಗುರುಗಳು ಬಹಳಷ್ಟು ಮಂದಿ. ಆದರೆ ಲೋಕದಲ್ಲಿ ಶಿಷ್ಯರ ಚಿತ್ತವನ್ನಪಹರಿಸುವ ಗುರು ತುಂಬ ದುರ್ಲಭ)

ಹನುಮಂತರಾಯರು ಇಂಥ ವಿರಳ ಗುರು ಗಮಕಿಯಾಗಿದ್ದವರು. ಕುಮಾರವ್ಯಾಸ ಭಾರತವೆಂದರೆ ಮೈಮರೆಯುತ್ತಿದ್ದರು; ಆವೇಶದಿಂದ ಮೈದುಂಬುತ್ತಿದ್ದರು. ಕುಮಾರವ್ಯಾಸ ಮತ್ತು ಲಕ್ಷ್ಮೀಶನ ಮೇಲೆ ಅವರಿಗೆಷ್ಟು ಪ್ರೀತಿ ಮತ್ತು ಭಕ್ತಿಗಳಿದ್ದುವೆಂದರೆ ತಮ್ಮ ಮೊಮ್ಮಕ್ಕಳಿಬ್ಬರಿಗೆ ಕುಮಾರವ್ಯಾಸ, ಲಕ್ಷ್ಮೀಶ ಎಂದೇ ನಾಮಕರಣ ಮಾಡಿಸಿದ್ದಾರೆ. ಶ್ರೇಷ್ಠ ಗಮಕಿಗಳೆಂಬ ಕಾರಣಕ್ಕೆ ಅವರಿಗೆ ರಾಜ್ಯಮಟ್ಟದ ಪ್ರಶಸ್ತಿಯೂ ದೊರೆಕಿತೆಂಬುದೊಂದೇ ಸಮಾಧಾನ. ೧೯೦೮–೧೯೯೮ರ ಆಸುಪಾಸಿನಲ್ಲಿ ಹುಟ್ಟಿ ಸುಮಾರು ೮೦ ವರ್ಷ ಬಾಳಿದ ಹೆಚ್ಚು ಕ್ರಮಬದ್ಧ ಶಿಕ್ಷಣವಿಲ್ಲದ, ಆದರೆ ಶ್ರೀಮಂತ ಜೀವನಾನುಭವದ ಈ ಹಿರಿಯರು ಕನ್ನಡದ ಶ್ರೇಷ್ಠ ಕಾವ್ಯಗಳಿಗಾಗಿ ತಮ್ಮ ಬದುಕನ್ನೇ ಮುಡಿಪಾಗಿಟ್ಟು ಜನಮನವನ್ನು ಸೂರೆಗೊಂಡಿದ್ದರೆಂಬುದು ನಿಜಕ್ಕೂ ಶ್ಲಾಘನೀಯವೇ ಸರಿ. ಇಂಥ ನಿಸ್ವಾರ್ಥಿಗಳಿಂದ ತಾನೆ ಕನ್ನಡ ಜೀವಂತವಾಗಿರುವುದು !

## ಅಭಿನವ ಬಸವಣ್ಣ

ನಿತ್ಯ ನೂತನ ನಿಜದ ತೇಜದ
ಸತ್ಯ ಮೂರುತಿಗೆ ಬೆಳಗಿರಾರತಿ
ಕರ್ತೃ ಶಿವಕುಮಾರ ಗುರುವರಗೆ
ಕರ್ತೃ ಶ್ರೀ ಗುರುವಿನ ಕಮ್ಮಟವಿದು ಶ್ರೀ ಸಿದ್ಧಗಂಗೆ

ಹನ್ನೆರಡು ಸಾವಿರ ಗಣಾಧೀಶ್ವರರಿಗೆ
ನಿತ್ಯ ದಾಸೋಹದ ಭಾರವಿದ್ದರೂ
ನಿರಾಭಾರಿಯಾಗಿ ನಿರಂಜನರಾಗಿ
ನಿರಾಮಯ ನಿತ್ಯ ತೃಪ್ತರಾಗಿ ಕೃಪೆಗೈವ ಶ್ರೀಗುರುವೆ

ವಿದ್ಯಾರ್ಥಿಗಳಿಗೆ ಕಾಮಧೇನುವಾಗಿ
ಶ್ರೀಸಾಮಾನ್ಯನಿಗೆ ಕಲ್ಪವೃಕ್ಷವಾಗಿ
ಜಾತ್ಯಾತೀತ ಮನೋಭಾವದ ಮಹದೇವ
ಜಂಗಮ ಜ್ಯೋತಿಯಾಗಿ ಜಗವನೇ ಬೆಳಗುವ
ಕಾಯಕಯೋಗಿ

ಭಕ್ತಿ ಭಂಡಾರಿ ಬಸವಣ್ಣನ ಆದರ್ಶ
ಜ್ಞಾನನಿಧಿ ಚೆನ್ನಬಸವಣ್ಣನ ತತ್ವನಿಷ್ಠೆ
ವೈರಾಗ್ಯ ಪ್ರಭುದೇವರ ಪ್ರಸನ್ನತೆ
ತ್ರಿಮೂರ್ತಿಗಳೆ ಏಕವಾಗಿ ಅಭಿನವ ಬಸವಣ್ಣನೆನಿಸಿದ ಶ್ರೀ
ಶಿವಕುಮಾರ ಸ್ವಾಮೀಜಿ !

– ನಾ.ಮ. ಬಸವರಾಜಯ್ಯ
ನಾಗರಹಾಳು, ಹಚ್ಚೊಳ್ಳಿ ಮಾರ್ಗ–೫೮೩ ೧೧೮
ಬಳ್ಳಾರಿ ಜಿಲ್ಲೆ

# ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ 63ನೇ ವಾರ್ಷಿಕ ಮಹಾಧಿವೇಶನ

## 'ಸಿದ್ಧಗಂಗಾಶ್ರೀ', 'ಸಿದ್ಧಗಂಗಾ ಶಿವಕುಮಾರಶ್ರೀ' ಹಾಗೂ 'ಸಂಘಸಿರಿ' ಪ್ರಶಸ್ತಿ ಪ್ರದಾನ




ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಮಹಾಧಿವೇಶನವನ್ನು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಹರುಗುರು ಚರಮೂರ್ತಿಗಳು, ಶ್ರೀ ಕೆ.ಎಚ್. ಶಿವರುದ್ರಯ್ಯ ಹಾಗೂ ಪ್ರಶಸ್ತಿ ಪುರಸ್ಕೃತರು ಉಪಸ್ಥಿತರಿದ್ದರು.

ಅರವತ್ತು ಮೂರು ವರ್ಷಗಳಿಂದ ಸಾರ್ಥಕ ಸೇವೆಯ ಸಲ್ಲಿಸುತ್ತಾ ಮನೆ-ಮನಗಳಲ್ಲಿ ಪ್ರೀತಿ, ವಿಶ್ವಾಸ, ಗೌರವಾದರಗಳಿಗೆ ಪಾತ್ರವಾಗಿರುವ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ೬೩ನೇ ವಾರ್ಷಿಕ ಮಹಾಧಿವೇಶನ ಮತ್ತು ನಾಡು ನುಡಿಗೆ ಸೇವೆ ಸಲ್ಲಿಸುತ್ತಿರುವ ಪ್ರಸಿದ್ಧ ವಿದ್ವಾಂಸರಿಗೆ, ಸಾಧಕರಿಗೆ, ಸಮಾಜ ಸೇವಕರಿಗೆ 'ಸಿದ್ಧಗಂಗಾಶ್ರೀ', 'ಸಿದ್ಧಗಂಗಾ ಶಿವಕುಮಾರಶ್ರೀ ಪ್ರಶಸ್ತಿ', ಹಾಗೂ ಸಂಘಸಿರಿ ಪ್ರಶಸ್ತಿ ಪ್ರದಾನ ಸಮಾರಂಭವು ಸಂಘದ ಸಂಸ್ಥಾಪಕ ಅಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರವ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಶ್ರೀಮಠದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ಉಪಸ್ಥಿತಿಯಲ್ಲಿ ೧೭-೧೨-೨೦೧೭ರ ಭಾನುವಾರ ಶ್ರೀ ಗೋಸಲ ಸಿದ್ಧೇಶ್ವರ ವೇದಿಕೆಯಲ್ಲಿ ಅರ್ಥಪೂರ್ಣವಾಗಿ ನಡೆಯಿತು. ಅಪಾರ ಸಂಖ್ಯೆಯಲ್ಲಿ ಶ್ರೀಮಠದ ಭಕ್ತರು, ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು, ಹಿತೈಷಿಗಳು ಭಾಗವಹಿಸಿ ಈ ಅಭೂತಪೂರ್ವ ಸಮಾರಂಭಕ್ಕೆ ಸಾಕ್ಷಿಯಾದರು.

ಈ ಮಹಾಧಿವೇಶನವನ್ನು ಉದ್ಘಾಟಿಸಿ ಗಣ್ಯರಿಗೆ ಸನ್ಮಾನಿಸಿ ಪ್ರಶಸ್ತಿಗಳನ್ನು ಪ್ರದಾನ ಮಾಡಿ ಆಶೀರ್ವದಿಸಿದ ಶ್ರೀಮಠದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಶಿವನುಡಿಯಲ್ಲಿ "ಶ್ರೀಮಠಕ್ಕೆ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳು ಅಮೂಲ್ಯ ಸಂಪತ್ತು. ಈ ಸಂಘದಿಂದ ಹಮ್ಮಿಕೊಂಡಿರುವ ಸ್ವಚ್ಛತಾ ಯೋಜನೆ, ಸಮಾಜದ ವಿವಿಧ ಕ್ಷೇತ್ರದಲ್ಲಿ ಹೆಸರು ಮಾಡಿರುವ ಗಣ್ಯರಿಗೆ ಪ್ರಶಸ್ತಿ ಪ್ರದಾನ, ಪ್ರತಿಭಾ ಪುರಸ್ಕಾರ ಎಲ್ಲವೂ ಉತ್ತಮ ಕಾರ್ಯಗಳಾಗಿವೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.





ಇದೊಂದು ಅವಿಸ್ಮರಣೀಯವಾದ ಆತ್ಮೀಯವಾದ ಸನ್ನಿವೇಶ. ಈ ಸುಸಂದರ್ಭದಲ್ಲಿ ಹಳೆಯ ವಿದ್ಯಾರ್ಥಿಗಳು ಆಗಮಿಸಿ ಶ್ರೀಮಠದ ಜೊತೆ ವಿದ್ಯಾರ್ಥಿ ಜೀವನದ ಅನುಭವಗಳನ್ನು ಮೆಲುಕು ಹಾಕಿ ಸ್ನೇಹಿತರ ಜೊತೆ ಹಂಚಿಕೊಂಡು, ಪರಮಪೂಜ್ಯರ ಆಶೀರ್ವಾದ ಪಡೆದ ಸಂತೋಷವನ್ನು ತರುವ ಕ್ಷಣಗಳಾಗಿವೆ. ಇದು ತಾಯಿ ಮಗುವಿನ ಭಾವನಾತ್ಮಕ ಸಂಬಂಧ. ಪೂಜ್ಯರು ನಿಮ್ಮನ್ನೆಲ್ಲಾ ಕಷ್ಟಪಟ್ಟು ಬೆಳೆಸಿದ್ದಾರೆ. ಅವರನ್ನು ನೋಡಿದಾಗ ಸೇವೆ, ಕಾಯಕ, ದಾಸೋಹ ಹಾಗೂ ಶಿವಯೋಗ ನೆನಪಾಗುತ್ತದೆ. ದೈವೀಸ್ವರೂಪಿಗಳಾದ ಪೂಜ್ಯರ ಕಾಲದಲ್ಲಿ ನಾವಿರುವುದೇ ಪುಣ್ಯ. ಸಂತರ ನುಡಿಯಂತೆ ದೀಪ ಬೆಳಕು ಚೆಲ್ಲುವಂತೆ, ಹೂವು ಸುಗಂಧ ಬೀರುವಂತೆ, ಪ್ರತಿಯೊಬ್ಬರು ಪರೋಪಕಾರಿಯಾಗಿ ಜೀವನ ನಡೆಸಬೇಕು. ಶಿಕ್ಷಣದ ಜೊತೆಗೆ ಸಂಸ್ಕಾರ ಅಳವಡಿಸಿಕೊಂಡು 'ನಿಮ್ಮ ಮಂಡೆಗೆ ಹೂವ ತಹೆನಲ್ಲದೆ ಹುಲ್ಲು ತಾರೆನು' ಎಂಬ ಅಕ್ಕನ ವಚನದಂತೆ ಆತ್ಮಗೌರವ, ಆಧ್ಯಾತ್ಮಿಕ ಶಕ್ತಿ ಬೆಳೆಸಿಕೊಂಡು ನಿಮ್ಮ ಜೀವನ ಪರಿಶುದ್ಧವಾಗುವಂತೆ ಬಾಳ್ವಿಕೆ ಮಾಡಿದರೆ ಪೂಜ್ಯರಿಗೆ ಅದಕ್ಕಿಂತ ಸಂತೋಷ ಬೇರೊಂದಿಲ್ಲ" ಎಂದು ನುಡಿದರು.

'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿಯನ್ನು ತುಮಕೂರಿನ ಶ್ರೀ ರಾಮಕೃಷ್ಣ ವಿವೇಕಾನಂದ ಆಶ್ರಮದ ಅಧ್ಯಕ್ಷರಾದ ಪೂಜ್ಯ ಡಾ॥ ಶ್ರೀ ವೀರೇಶಾನಂದ ಸರಸ್ವತಿ ಮಹಾಸ್ವಾಮಿಗಳವರು ಹಾಗೂ ಬೀದರ್‌ನ ಬಸವ ಸೇವಾ ಪ್ರತಿಷ್ಠಾನದ ಅಧ್ಯಕ್ಷರಾದ ಪೂಜ್ಯ ಅಕ್ಕ ಅನ್ನಪೂರ್ಣ ತಾಯಿಯವರಿಗೆ ಪ್ರದಾನ ಮಾಡಲಾಯಿತು. ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಶಾಲು ಹೊದಿಸಿ ಸ್ಮರಣಿಕೆ, ಅಭಿನಂದನಾ ಪತ್ರ ನೀಡಿ ಗೌರವಿಸಿ ಆಶೀರ್ವದಿಸಿದರು. ಪ್ರಶಸ್ತಿಯನ್ನು ಸ್ವೀಕರಿಸಿದ ಪೂಜ್ಯ ಶ್ರೀ ವೀರೇಶಾನಂದ ಸರಸ್ವತಿ ಮಹಾಸ್ವಾಮಿಗಳು ತಮ್ಮ ಕೃತಜ್ಞತಾನುಡಿಗಳಲ್ಲಿ 'ಸಿದ್ಧಗಂಗಾ ಶಿವಕುಮಾರಮಹಾಸ್ವಾಮಿಗಳ ಹೆಸರಿನ ಪ್ರಶಸ್ತಿ ಜೀವಮಾನದಲ್ಲಿ ಬೆಲೆ ಕಟ್ಟಲಾಗದ ಪ್ರಶಸ್ತಿ' ಸಂತೋಷದಿಂದ ಅಭಿಮಾನದಿಂದ ಸ್ವೀಕರಿಸಿದ್ದೇನೆ.

ತಾಯಿ ಪ್ರೀತಿಗೆ ಮೈಲಿಗೆಯಿಲ್ಲ, ಗುರುವಿನ ಆಶೀರ್ವಾದಕ್ಕೆ ಮುಪ್ಪಿಲ್ಲ. ಹಾಗೆ ನಡೆದಾಡುವ ದೇವರ ಈ ಅದಮ್ಯ ಸೇವೆಗೆ ಯಾವತ್ತೂ ಕೊನೆಯಿಲ್ಲ. ವಿಶ್ವಾದ್ಯಂತ ಸಾಧುಸಂತರು, ಬಡ ವಿದ್ಯಾರ್ಥಿಗಳು, ಸನ್ಯಾಸಿಗಳಿಗೆ ದೇದೀಪ್ಯಮಾನವಾದ ಹಿರಿಮೆ, ಗರಿಮೆ ತಂದು ಕೊಟ್ಟ ಶಿವಯೋಗಿಗಳು ಎಂದು ನುಡಿದರು.

ಹಸಿದು ಬಂದವರಿಗೆ ಜ್ಞಾನ, ಅನ್ನ, ಆಶ್ರಯ ನೀಡಿ ಜನರ ಶ್ರೇಯಸ್ಸಿಗೆ ತನ್ನ ಜೀವಮಾನವನ್ನೇ ಮುಡುಪಾಗಿಟ್ಟು ಅಂತರಾಷ್ಟ್ರೀಯ ಮಟ್ಟದಲ್ಲಿ ಸದ್ದು ಮಾಡುತ್ತಿರುವ ಆಧ್ಯಾತ್ಮಿಕ ಚಿಂತಕರು ಪೂಜ್ಯ ಶ್ರೀ ಶ್ರೀ ಶಿವಕುಮಾರ ಶ್ರೀಗಳು. ಕರುಳಿನ ಕುಡಿಗಳಂತಿರುವ ಎಲ್ಲಾ ಸನ್ಯಾಸಿಗಳಿಗೆ ಸ್ಫೂರ್ತಿ ನೀಡುವ ಮಾನಸ ಗಂಗೋತ್ರಿಯಾಗಿದೆ. ಬಸವೇಶ್ವರರ ಪರಿಕಲ್ಪನೆಯನ್ನು

## ಸಂಘಸಿರಿ ಪ್ರಶಸ್ತಿ ಪುರಸ್ಕೃತರು



ಶ್ರೀ ಡಿ.ಪಿ. ಸಿದ್ಧಗಂಗಯ್ಯ



ಶ್ರೀ ವಿ.ಪಿ. ಗಂಗಣ್ಣ



ಶ್ರೀ ರಾಜಶೇಖರ ಶಿವಬಸಪ್ಪ ಮಾಗನೂರ, ಬ್ಯಾಡಗಿ



ಶ್ರೀ ಶಂಭುಲಿಂಗಪ್ಪ ಪುಟ್ಟಪ್ಪ ಅಂಗಡಿ, ಬ್ಯಾಡಗಿ



ಶ್ರೀ ಬಿ.ಸಿ. ಮಳೀಮಠ, ರಾಣೆಬೆನ್ನೂರು



ಅಗಲಿದ ಸಂಘದ ಸದಸ್ಯರಿಗೆ ಶ್ರದ್ಧಾಂಜಲಿ

ಮುಂದುವರಿಸಿಕೊಂಡು ಬಂದಿರುವುದು ಶ್ರೀ ಸಿದ್ಧಗಂಗಾ ಮಠ.

'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿ ಸ್ವೀಕರಿಸಿದ ಬೀದರ್‌ನ ಬಸವ ಸೇವಾ ಪ್ರತಿಷ್ಠಾನದ ಅಧ್ಯಕ್ಷರಾದ ಪೂಜ್ಯ ಅಕ್ಕ ಅನ್ನಪೂರ್ಣ ತಾಯಿಯವರು ಮಾತನಾಡುತ್ತಾ ಶಿಕ್ಷಣದ ಜೊತೆ ಸಂಸ್ಕಾರವನ್ನು ನೀಡಬೇಕಾದ ಕರ್ತವ್ಯ ಶಿಕ್ಷಣ ಸಂಸ್ಥೆಗಳದ್ದಾಗಿದೆ. ಇಂತಹ ಶಿಕ್ಷಣವನ್ನು ನಾವು ಸಿದ್ಧಗಂಗಾಮಠದ ಆವರಣದಲ್ಲಿ ನೋಡಬಹುದು ಎಂದು ನುಡಿದರು. ರಾಜ್ಯದಲ್ಲಿ ಎಲ್ಲಾ ಮಠಗಳಿಗಿಂತಲೂ ಸಿದ್ಧಗಂಗಾ ಮಠಕ್ಕೆ ಬಹಳ ಗೌರವವಿದೆ. ಸಿದ್ಧಗಂಗಾ ಶ್ರೀಗಳು ಸುಪ್ರಭಾತದ ವೇಳೆಯಲ್ಲಿ ಮಾಡುವ ಲಿಂಗಪೂಜೆಯ ಸೌಂದರ್ಯ, ಸಂಭ್ರಮ ಬೇರೆ ಯಾವ ಮಠದಲ್ಲಿಯೂ ನೋಡಲು ಸಾಧ್ಯವಿಲ್ಲ. ಈ ಅವಕಾಶ ಕಣ್ತುಂಬಿಕೊಳ್ಳಲು ಅದೆಷ್ಟೋ ಮಂದಿ ಜನತೆ ಈ ಕ್ಷೇತ್ರಕ್ಕೆ ಭೇಟಿ ನೀಡುತ್ತಾರೆ. ಸಾವಿರಾರು ಮಕ್ಕಳಿಗೆ ದಿನನಿತ್ಯ ಅನ್ನ ನೀಡುವ ಮೂಲಕ ಶ್ರೀ ಸಿದ್ಧಗಂಗಾ ಶ್ರೀಗಳು ಮನುಷ್ಯನಲ್ಲಿ ದೇವರನ್ನು ಕಂಡಿದ್ದಾರೆ. ಲಿಂಗದ ಬಾಯಿ ಜಂಗಮ ಎಂಬ ಮಾತಿಗೆ ಅರ್ಥವನ್ನು ನೀಡಿದ್ದಾರೆ ಎಂದರು.

'ಸಂಘಸಿರಿ' ಪ್ರಶಸ್ತಿಯನ್ನು ಶ್ರೀಮಠದ ಹಳೆಯ ವಿದ್ಯಾರ್ಥಿಗಳು, ನಿವೃತ್ತ ಮುಖ್ಯಶಿಕ್ಷಕರಾದ ಶ್ರೀ ಡಿ.ಪಿ. ಸಿದ್ಧಗಂಗಯ್ಯನವರು, ಸಹಕಾರ ಸಂಘದ ನಿವೃತ್ತ ಅಧ್ಯಕ್ಷರಾದ ಶ್ರೀ ಪಿ.ವಿ. ಗಂಗಣ್ಣನವರು, ಶ್ರೀಮಠದ ಭಕ್ತರು, ಮಹಾದಾನಿಗಳು ಆದ ಬ್ಯಾಡಗಿ ಶ್ರೀ ರಾಜಶೇಖರ್ ಶಿವಬಸಪ್ಪ ಮಾಗನೂರ, ಶ್ರೀ ಶಂಭುಲಿಂಗಪ್ಪ ಪುಟ್ಟಪ್ಪ ಅಂಗಡಿ ಹಾಗೂ ರಾಣೆಬೆನ್ನೂರಿನ ಶ್ರೀ ಬಿ.ಸಿ. ಮಳೀಮಠರವರಿಗೆ ಪ್ರದಾನ ಮಾಡಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಆಶೀರ್ವದಿಸಿದರು.

೨೦೧೬-೧೭ನೇ ಸಾಲಿನಲ್ಲಿ ಅತ್ಯುನ್ನತ ಶ್ರೇಣಿಯಲ್ಲಿ ಅಂಕ ಪಡೆದ ಶ್ರೀಮಠದ ಪರಿಸರದಲ್ಲಿರುವ ಪ್ರೌಢಶಾಲೆ ಹಾಗೂ ಪ್ರಾಥಮಿಕ ಶಾಲೆಗಳ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಪರಮಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ನಗದು ಬಹುಮಾನ ನೀಡಿ, ಸನ್ಮಾನಿಸಿ ಆಶೀರ್ವದಿಸಿದರು.

ಇದೇ ಸಂದರ್ಭದಲ್ಲಿ ಸಿದ್ಧಗಂಗಾ ಶಿವಕುಮಾರಶ್ರೀ ಪ್ರಶಸ್ತಿ ಪ್ರಾಯೋಜಕರಾದ ಬೆಂಗಳೂರಿನ ಶರಣರ ಬಳಗದ ಅಧ್ಯಕ್ಷರಾದ ಶ್ರೀಮತಿ ಶಕುಂತಲಾ ಜಯದೇವ್ ಹಾಗೂ ಪ್ರತಿಭಾ ಪುರಸ್ಕಾರದ ದಾನಿಗಳಾದ ಬೆಂಗಳೂರಿನ ಕೃಷಿ ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕರಾದ ಡಾ. ಬಿ.ಎಸ್. ಸಿದ್ಧರಾಮಯ್ಯನವರಿಗೆ ಪರಮಪೂಜ್ಯ ಶ್ರೀಗಳವರು ಸನ್ಮಾನಿಸಿ ಆಶೀರ್ವದಿಸಿದರು.

ಕಾರ್ಯಕ್ರಮ ಶ್ರೀ ಎನ್.ಆರ್. ಜ್ಞಾನಮೂರ್ತಿರವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಎಂ.ಎನ್. ಚನ್ನಬಸಪ್ಪನವರು ಪೂಜ್ಯರಾದಿಯಾಗಿ ಎಲ್ಲರನ್ನು ಸ್ವಾಗತಿಸುತ್ತಾ ಪ್ರಾಸ್ತಾವಿಕವಾಗಿ ಮಾತನಾಡಿ ಸಂಘ ನಡೆದು ಬಂದ ಹಾದಿಯನ್ನು ಪರಿಚಯ ಮಾಡಿಕೊಟ್ಟರು. ಪೂಜ್ಯ ಶ್ರೀಗಳವರ ಆಶೀರ್ವಾದ ಮತ್ತು ಮಾರ್ಗದರ್ಶನದಿಂದ ಸಂಘ ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಾಧನೆಯ ಪಥದಲ್ಲಿ ಮುನ್ನಡೆಸಿಕೊಂಡು ಬರಲು ಸಾಧ್ಯವಾಗಿದೆ. ಹಳೆಯ ವಿದ್ಯಾರ್ಥಿಗಳು, ಹಿತೈಷಿಗಳು ಕಾಲಕಾಲಕ್ಕೆ ಸಂಘಕ್ಕೆ ಸ್ಪಂದಿಸಿ, ನೆರವು ಸಹಕಾರ, ಪ್ರೋತ್ಸಾಹ ನೀಡುತ್ತಾ ಬಂದಿರುವುದನ್ನು ಮುಕ್ತಕಂಠದಿಂದ ಶ್ಲಾಘಿಸಿದರು. ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್ ಬಗ್ಗೆ ಪ್ರಸ್ತಾಪಿಸಿ ಅದರ ಸಂಪೂರ್ಣ ಯಶಸ್ಸಿಗೆ ಎಲ್ಲರೂ ಸಹಕಾರ ಸಹಾಯ ಮಾಡುವಂತೆ ಕೋರಿ ಎಲ್ಲರನ್ನು ಸ್ವಾಗತಿಸಿದರು.

ಪ್ರಸಕ್ತ ಸಾಲಿನಲ್ಲಿ ನಮ್ಮನ್ನಗಲಿರುವ ಸಂಘದ ಸದಸ್ಯರಿಗೆ ಒಂದು ನಿಮಿಷ ಮೌನ ಆಚರಿಸುವ ಮೂಲಕ ಭಾವಪೂರ್ಣ ಶ್ರದ್ಧಾಂಜಲಿ ಸಲ್ಲಿಸಿ ಮೃತರ ಆತ್ಮಕ್ಕೆ ಶಾಂತಿ ಕೋರಲಾಯಿತು. ಸಂಘದ ಕಾರ್ಯದರ್ಶಿಗಳಾದ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಅಗಲಿದ ಸದಸ್ಯರ ವಿವರಗಳನ್ನು ಸಭೆಯ ಗಮನಕ್ಕೆ ತಂದರು. ನಂತರ ಸಂಘದ ವಾರ್ಷಿಕ ಸಂಕ್ಷಿಪ್ತ ವರದಿಯನ್ನು ಮಂಡಿಸಿದರು.

**೨೦೧೬-೨೦೧೭ನೇ ಸಾಲಿನ ಲೆಕ್ಕಪತ್ರಗಳ ಪರಿಶೋಧನೆ, ೨೦೧೭-೧೮ನೇ ಸಾಲಿನ ಆಯವ್ಯಯ ಮಂಡನೆ**

ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ವರದಿಯನ್ನು ಸಹಕಾರ್ಯದರ್ಶಿಗಳಾದ ಶ್ರೀ ಎಸ್. ಶಿವಕುಮಾರ್‌ರವರು, ಹಳೆಯ ವಿದ್ಯಾರ್ಥಿ ಸಂಘ ಹಾಗೂ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ನ ವರದಿಯನ್ನು ಕಾರ್ಯದರ್ಶಿಗಳಾದ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಸಭೆಯ ಮುಂದೆ ಮಂಡಿಸಿ ಅನುಮೋದನೆ ಪಡೆದರು. ಶ್ರೀಮಠದ ನೀರು ಸರಬರಾಜು ಮತ್ತು ನೈರ್ಮಲ್ಯದ ಯೋಜನೆ ಪ್ರಗತಿ ಕುರಿತು ಸದಸ್ಯರಿಂದ ಸಲಹೆ ಸೂಚನೆ ಪಡೆಯಲಾಯಿತು. ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟಿಗೆ ನಿಧಿ ಸಂಗ್ರಹಣೆಯ ಬಗ್ಗೆ ಮಾರ್ಗೋಪಾಯಗಳ ಬಗ್ಗೆ ಕಾರ್ಯದರ್ಶಿಗಳಾದ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ತಿಳಿಸಿದರು. ಇದೇ ಸಂದರ್ಭದಲ್ಲಿ ಅನೇಕ ಜನ ಹಳೆಯ ವಿದ್ಯಾರ್ಥಿಗಳು ಹಿತೈಷಿಗಳು ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ಉದಾರವಾಗಿ ಸಾಕಷ್ಟು ಮಂದಿ ಹಣ ಸಂದಾಯ ಮಾಡಿದರು. ಸಿದ್ಧಗಂಗಾ ಮಾಸಪತ್ರಿಕೆ ಸಂಪಾದಕರು ಹಾಗೂ ಜಾನಪದ ಸಾಹಿತಿಗಳಾದ ಪ್ರೊ. ಹೆಚ್.ವಿ. ವೀರಭದ್ರಯ್ಯನವರು ಕಾರ್ಯಕ್ರಮ ನಿರೂಪಣೆ ಮಾಡಿದರು. ಶ್ರೀ ಕೆ.ಬಿ. ಶಿವಶಂಕರಯ್ಯನವರು ವಂದನಾರ್ಪಣೆ ಸಲ್ಲಿಸಿದರು.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ. ವಾರ್ಷಿಕ ಚಂದಾದಾರರು ತಮ್ಮ ಸದಸ್ಯತ್ವವನ್ನು ನವೀಕರಿಸಿ ಕೊಳ್ಳಬೇಕೆಂದು ಕೋರಲಾಗಿದೆ.

**ಪ್ರಕಾಶಕರು,**
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : 0816-2282322

# ಧಾರವಾಡದಲ್ಲಿ ನಾಡೋಜ ಡಾ. ಕಣವಿ ಅವರಿಗೆ 'ಸಿದ್ಧಗಂಗಾ ಶ್ರೀ' ಪ್ರಶಸ್ತಿ ಪ್ರದಾನ



'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ಸ್ವೀಕರಿಸಬೇಕಾಗಿದ್ದ ಹಿರಿಯ ಕವಿ ನಾಡೋಜ ಡಾ. ಚನ್ನವೀರ ಕಣವಿ ಅವರು ಅನಿವಾರ್ಯ ಕಾರಣಗಳಿಂದ ಸಮಾರಂಭದಲ್ಲಿ ಭಾಗವಹಿಸಲು ಸಾಧ್ಯವಾಗದೇ ಇದ್ದುದರಿಂದ ಪೂಜ್ಯ ಶ್ರೀ ಶ್ರೀಗಳವರ ಆದೇಶದಂತೆ ಡಿಸೆಂಬರ್ ೨೧, ೨೦೧೭ ರಂದು ಧಾರವಾಡದ ಅವರ ನಿವಾಸದಲ್ಲಿ ಪ್ರಶಸ್ತಿ ಪ್ರದಾನ ಮಾಡಲಾಯಿತು. ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿಗಳ ಸಂಘದ ಕಾರ್ಯದರ್ಶಿ ಶ್ರೀ ಕೆ.ಎಚ್. ಶಿವರುದ್ರಯ್ಯ, ಸಿದ್ಧಗಂಗಾ ಪತ್ರಿಕೆ ಸಂಪಾದಕರಾದ ಪ್ರೊ. ಹೆಚ್.ವಿ. ವೀರಭದ್ರಯ್ಯ, ಸಿದ್ಧಗಂಗಾ ಪತ್ರಿಕಾ ಬಳಗದ ಶ್ರೀ ಎಂ. ರೇಣುಕಾರಾಧ್ಯ, ಶ್ರೀ ಕೆ.ಬಿ. ಶಿವಶಂಕರಯ್ಯ, ಶ್ರೀ ಬಿ. ಪ್ರಕಾಶ್, ಹಳೆಯ ವಿದ್ಯಾರ್ಥಿಗಳಾದ ಶ್ರೀ ರಾಜಶೇಖರಯ್ಯ, ಶ್ರೀ ಸದಾಶಿವಯ್ಯ ಹಾಗೂ ಹಿರಿಯ ವಿದ್ವಾಂಸರಾದ ಡಾ. ಗುರುಲಿಂಗ ಕಾಪಸೆ ಮೊದಲಾದ ಸಾಹಿತಿ, ವಿದ್ವಾಂಸರ ಸಮ್ಮುಖದಲ್ಲಿ ಪ್ರದಾನ ಮಾಡಲಾಯಿತು. ಪ್ರಶಸ್ತಿ ೧ ಲಕ್ಷ ರೂ.ಗಳ ನಗದು, ಅಭಿನಂದನಾ ಪತ್ರ ಹಾಗೂ ಸ್ಮರಣಿಕೆಯನ್ನು ಒಳಗೊಂಡಿದೆ.

ಪ್ರಶಸ್ತಿ ಸ್ವೀಕರಿಸಿ ಮಾತನಾಡಿದ ಡಾ. ಕಣವಿಯವರು 'ನನಗೆ ಸಿದ್ಧಗಂಗಾಶ್ರೀ ಪ್ರಶಸ್ತಿ ಲಭಿಸಿದ್ದು ಅತ್ಯಂತ ಸಂತಸ ತಂದಿದೆ. ನನಗೆ ರಾಷ್ಟ್ರಕವಿ, ಜ್ಞಾನಪೀಠ ಯಾವ ಬಿರುದು ಬೇಕಿಲ್ಲ. ಅದಕ್ಕಿಂತ ಸಿದ್ಧಗಂಗಾಶ್ರೀ ಪ್ರಶಸ್ತಿ ಪರಮೋಚ್ಛವಾಗಿದೆ ಎಂದು ಕೃತಜ್ಞತೆಯಿಂದ ನುಡಿದರು. ಸಿದ್ಧಗಂಗಾ ಜಾತ್ಯಾತೀತ ಮಠ. ಪೂಜ್ಯ ಶ್ರೀ ಶಿವಕುಮಾರ ಸ್ವಾಮಿಗಳು ವಿದ್ಯಾರ್ಥಿಗಳಲ್ಲಿ ದೇವರನ್ನು ಕಂಡವರು. ಅವರ ಕಾಯಕ, ದಾಸೋಹ, ಸಮಯನಿಷ್ಠೆ, ಪವಿತ್ರವಾದ ಇಷ್ಟಲಿಂಗಪೂಜಾನಿಷ್ಠೆ, ಸಂಭ್ರಮ ನೋಡಿ ಮೂಕವಿಸ್ಮಿತನಾಗಿದ್ದೇನೆ. ಪೂಜ್ಯರ ಲೋಕ ಕಲ್ಯಾಣದ ಬದುಕು ನಮಗೆ ಸ್ಫೂರ್ತಿ ನೀಡಿದೆ ಎಂದು ಭಾವುಕರಾಗಿ ನುಡಿದರು.

ಡಾ. ಕೇಯೂರ ಕರಗುಡದಿ ಅವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಡಾ. ಗುರುಲಿಂಗ ಕಾಪಸೆ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಪ್ರಾಸ್ತಾವಿಕ ನುಡಿಗಳನ್ನಾಡಿದರು. ಡಾ. ಅಲ್ಲಮಪ್ರಭು ಬೆಟ್ಟದೂರ ಹಾಗೂ ಶ್ರೀ ಶಂಕರ ಹಲಗತ್ತಿ ಅಭಿನಂದನಾ ನುಡಿಗಳ ಮೂಲಕ ಗೌರವ ಸಲ್ಲಿಸಿದರು. ಶ್ರೀ ಶಶಿಧರ ತೋಡಕರ, ಶ್ರೀ ಹಿರೇಮಲ್ಲೂರ ಈಶ್ವರನ್ ಕಾರ್ಯಕ್ರಮ ನಿರೂಪಣೆ ಮಾಡಿದರು. ಶ್ರೀ ಕೆ.ಬಿ. ಶಿವಶಂಕರಯ್ಯ ಅಭಿನಂದನಾ ಪತ್ರವನ್ನು ವಾಚನ ಮಾಡಿದರು.

ಈ ಸಮಾರಂಭದಲ್ಲಿ ಶ್ರೀಮತಿ ಕಣವಿಯವರು, ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳಾದಿಯಾಗಿ ಇಡೀ ಕುಟುಂಬದ ಬಳಗ ಆಗಮಿಸಿದ್ದರಿಂದ ಸಾಹಿತ್ಯ ಹಬ್ಬದ ಸಂಭ್ರಮ ಮನೆ ಮಾಡಿತ್ತು. ಸದ್ದುಗದ್ದಲವಿರದ ಪ್ರಶಾಂತವಾದ ಅಚ್ಚುಕಟ್ಟಾದ ಸಮಾರಂಭದ ವ್ಯವಸ್ಥೆ, ದಿಗ್ಗಜ ಸಾಹಿತಿಗಳ ಸಮಾಗಮ, ಆದರದ ಆತಿಥ್ಯ, ಹೃದಯತುಂಬಿದ ಭಾವನಾತ್ಮಕ ವಾತ್ಸಲ್ಯ, ಆತ್ಮೀಯತೆ, ಮರೆಯಲಾಗದ ಅಪರೂಪದ ಕ್ಷಣಗಳು.

*– ವರದಿ : ಕೆ.ಬಿ. ಶಿವಶಂಕರಯ್ಯ*





# ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಜ್ರಮಹೋತ್ಸವ ಸವಿನೆನಪಿನ ಕ್ರೀಡಾಕೂಟ–೨೦೧೭

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಜ್ರಮಹೋತ್ಸವ ಸವಿನೆನಪಿನ ಕ್ರೀಡಾಕೂಟ ದಿನಾಂಕ ೮–೧೨–೨೦೧೭ರಿಂದ ೧೦–೧೨–೨೦೧೭ ರವರೆಗೆ ಶ್ರೀ ಸಿದ್ಧಗಂಗಾಮಠದಲ್ಲಿ ನಡೆಯಿತು. ಈ ಕ್ರೀಡಾಕೂಟದಲ್ಲಿ ಸಿದ್ಧಗಂಗಾ ವಿದ್ಯಾಸಂಸ್ಥೆಯ ೫೬ ಪ್ರೌಢಶಾಲೆಗಳು, ೮ ಪ್ರಾಥಮಿಕ ಶಾಲೆಗಳ ಒಟ್ಟು ೧೫೧೩ ಕ್ರೀಡಾಪಟುಗಳು, ೬೪ ಜನ ಮೆಸೆಂಜರ್, ೬೮ಜನ ದೈಹಿಕ ಶಿಕ್ಷಣ ಅಧಿಕಾರಿಗಳು, ಬಿ.ಪಿ.ಇಡಿ. ಕಾಲೇಜಿನ ಎಲ್ಲಾ ಸಿಬ್ಬಂದಿಗಳು ಮತ್ತು ಶಿಕ್ಷಣಾರ್ಥಿಗಳು ಭಾಗವಹಿಸಿದ್ದರು. ದಾನಿಗಳ ಸಹಕಾರದಿಂದ ಈ ಕಾರ್ಯಕ್ರಮ ಯಶಸ್ವಿಯಾಗಿ ನಡೆಯಿತು.

ದಿನಾಂಕ ೮–೧೨–೨೦೧೭ರಂದು ಸಂಜೆ ೪ ಗಂಟೆಗೆ ಶ್ರೀ ಗೋಸಲ ಸಿದ್ಧೇಶ್ವರ ವೇದಿಕೆಯಲ್ಲಿ ಉದ್ಘಾಟನಾ ಸಮಾರಂಭ ನಡೆಯಿತು. ಶ್ರೀಮಠದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಈ ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿ ಕ್ರೀಡಾ ಪಟುಗಳನ್ನು ಆಶೀರ್ವದಿಸಿದರು.

ಈ ಸಮಾರಂಭವನ್ನು ತುಮಕೂರು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಹನುಮಾನಾಯಕ್‌ರವರು ಉದ್ಘಾಟನೆ ಮಾಡಿ ಕ್ರೀಡಾಪಟುಗಳಿಗೆ ಹಿತನುಡಿ ತಿಳಿಸಿದರು. ಧ್ವಜಾರೋಹಣವನ್ನು ಕೇಂದ್ರ ಸಾಯಿ ಸಮಿತಿ ಸಂಸ್ಥೆಯ ಬ್ಯಾಡ್‌ಮಿಂಟನ್ ತರಬೇತಿದಾರರಾದ ಶ್ರೀ ಪ್ರಸಾದ್ ಗಂಗೂಲಿಯವರು ನೆರವೇರಿಸಿದರು. ತುಮಕೂರು ಯುವ ಸಬಲೀಕರಣ ಹಾಗೂ ಕ್ರೀಡಾ ಇಲಾಖೆಯ ಸಹಾಯಕ ನಿರ್ದೇಶಕರಾದ ಶ್ರೀಮತಿ ಜಯಲಕ್ಷ್ಮಿರವರು ಕ್ರೀಡಾಜ್ಯೋತಿ ಹಾಗೂ ವಂದನಾ ಸ್ವೀಕಾರ ಮಾಡಿದರು. ಸಮಾರಂಭದ ಅಧ್ಯಕ್ಷತೆಯನ್ನು ಪ್ರೌಢಶಿಕ್ಷಣ ಪರೀಕ್ಷಾಮಂಡಳಿ ಸಹಾಯಕ ನಿರ್ದೇಶಕರಾದ ಶ್ರೀಮತಿ ಗಿರಿಜಾರವರು ವಹಿಸಿದ್ದರು.

ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಪ್ರಶಸ್ತಿ ಪಡೆದ ೧೮ ಜನ ಕ್ರೀಡಾಪಟುಗಳಿಗೆ ಹಾಗೂ ಕ್ರೀಡಾಕ್ಷೇತ್ರದಲ್ಲಿ ಸಾಧನೆ ಮಾಡಿರುವ ಶ್ರೀ ಪ್ರಸಾದ್ ಗಂಗೂಲಿ ಅವರನ್ನು ಪರಮಪೂಜ್ಯ ಶ್ರೀಗಳು ಸನ್ಮಾನಿಸಿ ಆಶೀರ್ವದಿಸಿದರು.

ಈ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಶ್ರೀಮಠದ ವಿದ್ಯಾಧಿಕಾರಿಗಳಾದ ಶ್ರೀ ಸಿ.ಎಸ್. ಸಿದ್ಧಲಿಂಗಯ್ಯ, ಶ್ರೀಮಠದ ವ್ಯವಸ್ಥಾಪಕರಾದ ಶ್ರೀ ಎಲ್. ಬಸವರಾಜು ರವರು, ಆಡಳಿತಾಧಿಕಾರಿಗಳಾದ ಶ್ರೀ ಎಸ್. ವಿಶ್ವನಾಥಯ್ಯ ಅವರು ಭಾಗವಹಿಸಿದ್ದರು.

ದಿನಾಂಕ ೧೦–೧೨–೨೦೧೭ರ ಭಾನುವಾರ ಸಂಜೆ ೫.೩೦ ಗಂಟೆಗೆ ಶ್ರೀಮಠದ ಪ್ರಾರ್ಥನಾ ಸಭಾಂಗಣದಲ್ಲಿ ಮುಕ್ತಾಯ ಸಮಾರಂಭವನ್ನು ನಡೆಯಿತು. ಇದರ ದಿವ್ಯಸಾನ್ನಿಧ್ಯವನ್ನು ಶ್ರೀಮಠದ ಅಧ್ಯಕ್ಷರಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ವಹಿಸಿದ್ದರು. ಈ ಕ್ರೀಡಾಕೂಟದಲ್ಲಿ ವಿಜೇತರಾದ ಕ್ರೀಡಾಪಟುಗಳಿಗೆ ತುಮಕೂರಿನ ಉಪನಿರ್ದೇಶಕರಾದ ಕಛೇರಿಯ ಶಿಕ್ಷಣಾಧಿಕಾರಿ ಶ್ರೀ ರಂಗದಾಸಪ್ಪನವರು ಬಹುಮಾನಗಳನ್ನು ವಿತರಣೆ ಮಾಡಿದರು. ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆಯ ಮುಖ್ಯಶಿಕ್ಷಕರಾದ ಶ್ರೀ ಸಿ. ರೇವಣಸಿದ್ಧಯ್ಯನವರು ಸ್ವಾಗತಿಸಿದರು. ಶಿಕ್ಷಕರಾದ ಶ್ರೀ ಜಿ. ರುದ್ರೇಶ್‌ರವರು ಪ್ರಾಸ್ತಾವಿಕ ನುಡಿ ತಿಳಿಸಿದರು. ಸಹಶಿಕ್ಷಕರಾದ ಶ್ರೀ ಎಂ. ನಂದೀಶ್‌ರವರು ವಂದನಾರ್ಪಣೆ ಮಾಡಿದರು. ಸಹಶಿಕ್ಷಕರಾದ ಶ್ರೀ ಕೆ.ಬಿ. ಶಿವಶಂಕರಯ್ಯನವರು ಕಾರ್ಯಕ್ರಮ ನಿರೂಪಿಸಿದರು.

*ವರದಿ : ಕೆ.ಬಿ. ಶಿವಶಂಕರಯ್ಯ*

### ಶ್ರೀವಾಣಿ

ಕಾವಿ ಕಾರುಣ್ಯದ ಕಾರಂಜಿಯಾಗಬೇಕು. ಮಗುವಿನ ಮುಗ್ಧಮನ; ಪ್ರಬುದ್ಧ ವಿಚಾರ ಶುದ್ಧವಿರಬೇಕು. ಕಾವಿವಸ್ತ್ರ ಹಣ, ಅನುಕೂಲ, ಆಶ್ರಯಾದಿಗಳು ಆಮಿಷಗಳನ್ನೊಡ್ಡಿ ಸಮಾಜವನ್ನು ತಪ್ಪು ದಾರಿಗೆಳೆಯುವಂಥ ಜೀವನಕ್ಕಾಗಿಯಲ್ಲ; ಅಂತರಂಗದಲ್ಲಿ ಅಲೆ ಅಲೆಯಾಗಿ ಏಳುವ ಅಸಂಖ್ಯಾತ ಕಾಮನೆಗಳನ್ನು ಸುಡುವುದಕ್ಕಾಗಿ ಕಾವಿ ಮಾಧ್ಯಮವನ್ನಲಂಬಿಸಬೇಕು. ಅಂತರಂಗ ಬಹಿರಂಗಗಳೆರಡನ್ನೂ ಏಕಕಾಲಕ್ಕೆ ಪವಿತ್ರಗೊಳಿಸುವ ಪ್ರವೃತ್ತಿಗಾಗಿ ಕಾವಿಧಾರಿಯಾಗಬೇಕು. ಸ್ವಾಮಿತ್ವ ಮೊದಲು ತನ್ನ ದೌರ್ಬಲ್ಯಗಳ ಮೇಲೆ, ಆಮೇಲೆ ಲೋಕ ಜೀವನದ ವ್ಯವಹಾರದ ಮೇಲೆ. ಪ್ರಾಚೀನ ಪರಂಪರೆ ಕಾವಿ ಲಾಂಛನಕ್ಕೆ ಅತ್ಯುತ್ತಮ ಮಾರ್ಗದರ್ಶನ ಮಾಡುತ್ತಾ ಬಂದಿದೆ.

## ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯ ಮತ್ತೊಂದು ಮೈಲಿಗಲ್ಲು

# 'ಬಸವಶ್ರೀ ಡಯಾಗ್ನಾಸ್ಟಿಕ್ ಮತ್ತು ನರರೋಗ ಪುನರುತ್ಥಾನ ಕೇಂದ್ರ'ದ ಲೋಕಾರ್ಪಣೆ

ಸಹಕಾರಿ ಧುರೀಣ, ಕಾಯಕ ರತ್ನ, ಶ್ರೀ ಬಿ.ಎಸ್. ಪರಮಶಿವಯ್ಯನವರ ನೇತೃತ್ವದಲ್ಲಿ ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆ ಅಲ್ಪಕಾಲದಲ್ಲಿ ಎಸ್.ಜೆ.ಎಂ. ಟವರ್ಸ್, ವಿದ್ಯಾರ್ಥಿ-ವಿದ್ಯಾರ್ಥಿನಿಯರ ಉಚಿತ ವಿದ್ಯಾರ್ಥಿ ನಿಲಯ, ಜ್ಞಾನಪ್ರಕಾಶ ಕಲ್ಯಾಣ ಮಂಟಪ, ಬಸವೇಶ್ವರ ಸುಜ್ಞಾನ ಮಂಟಪ ಹಾಗೂ ಶ್ರೀ ಅಲ್ಲಮಪ್ರಭು ಆತ್ಮಜ್ಞಾನ ಮಂಟಪ, ಪದವಿ ಕಾಲೇಜು, ಕೇಂದ್ರ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ಕೇಂದ್ರವೂ ಸೇರಿದಂತೆ ಸಾಧನೆಯ ಮೈಲಿಗಲ್ಲುಗಳನ್ನು ನೆಡುತ್ತಾ ಬಂದಿದ್ದು, ಇದೀಗ 'ಬಸವಶ್ರೀ' ದಯಾಗ್ನಾಸ್ಟಿಕ್ ಕೇಂದ್ರವೂ ಸೇರ್ಪಡೆಯಾಗಿದೆ ಎಂದು ತಿಳಿಸಲು ಅಭಿಮಾನವೆನಿಸುತ್ತದೆ.



ಡಿಸೆಂಬರ್ ೫ ರಂದು ಬೆಂಗಳೂರಿನ ನಾಗರಭಾವಿ ೨ನೇ ಹಂತದಲ್ಲಿ ನಿರ್ಮಿಸಲಾಗಿರುವ ಅತ್ಯಾಧುನಿಕ ಸೌಲಭ್ಯಗಳನ್ನೊಳಗೊಂಡ 'ಬಸವಶ್ರೀ ಡಯಾಗ್ನಾಸ್ಟಿಕ್ ಕೇಂದ್ರ'ದ ಲೋಕಾರ್ಪಣೆ ಸಮಾರಂಭ ಬಾಳೆಹೊನ್ನೂರು, ಉಜ್ಜಯಿನಿ, ಶ್ರೀಶೈಲ ಸಂಸ್ಥಾನ ಮಠದ ಶ್ರೀಗಳು, ಸುತ್ತೂರು ಜಗದ್ಗುರುಗಳು, ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರು ಸೇರಿದಂತೆ ಹರಗುರು ಚರಮೂರ್ತಿಗಳ ದಿವ್ಯಸಾನ್ನಿಧ್ಯದಲ್ಲಿ ಅಭೂತಪೂರ್ವವಾಗಿ ನಡೆಯಿತು.

ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಿ.ಎಸ್. ಪರಮಶಿವಯ್ಯನವರು ಸರ್ವರನ್ನು ಸ್ವಾಗತಿಸಿ ಸಂಸ್ಥೆ ಸಾಧನಾ ಪಥದಲ್ಲಿ ಮುನ್ನಡೆಯಲು ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಕಾರ ನೀಡಿದವರನ್ನು ಕೃತಜ್ಞತೆಯಿಂದ ಸ್ಮರಿಸಿದರು.

ಮಾಜಿ ಮುಖ್ಯಮಂತ್ರಿಗಳು, ಸಂಸದರು, ಭಾರತೀಯ ಜನತಾ ಪಕ್ಷದ ರಾಜ್ಯಾಧ್ಯಕ್ಷರಾದ ಶ್ರೀ ಬಿ.ಎಸ್. ಯಡಿಯೂರಪ್ಪ ನವರು ಜ್ಯೋತಿ ಬೆಳಗಿಸಿ 'ಬಸವಶ್ರೀ ಡಯಾಗ್ನಾಸ್ಟಿಕ್ ಕೇಂದ್ರ'ವನ್ನು ಲೋಕಾರ್ಪಣೆ ಮಾಡಿ ನಮ್ಮ ಸಾಧನೆ ಮಾತನಾಡಬೇಕು, ಮಾತನಾಡುವುದೇ ಸಾಧನೆಯಾಗ ಬಾರದು. ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯ









ನೇತೃತ್ವ ವಹಿಸಿರುವ ಪರಮಶಿವಯ್ಯ ಅವರ ಸಾಧನೆ ಮಾತನಾಡುತ್ತಿದೆ ಎಂದು ತುಂಬು ಹೃದಯದಿಂದ ಶ್ಲಾಘಿಸಿ, ಸೂಕ್ತ ಸಂದರ್ಭದಲ್ಲಿ ಅವರು ಸಲ್ಲಿಸುತ್ತಿರುವ ಸೇವೆಗೆ ನ್ಯಾಯ ಒದಗಿಸಿಕೊಡುವ ಭರವಸೆ ನೀಡಿದರು.

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ ಶ್ರೀ ಪರಮಶಿವಯ್ಯನವರು ಸಮಾಜ ಸೇವೆಗೆ ತಮ್ಮನ್ನು ಅರ್ಪಿಸಿಕೊಂಡಿರುವುದಕ್ಕೆ ಸಂತೋಷವನ್ನು ವ್ಯಕ್ತಪಡಿಸಿದ ಶ್ರೀಗಳು, ಎಲ್ಲ ಭಾಗ್ಯಗಳಿಗಿಂತ ಆರೋಗ್ಯಭಾಗ್ಯ ಮುಖ್ಯವಾದುದು. ಅಂತಹ ಆರೋಗ್ಯವನ್ನು ಕಾಪಾಡಿಕೊಳ್ಳುವಲ್ಲಿ ಈ ಕೇಂದ್ರ ಶ್ರೀಸಾಮಾನ್ಯನನ್ನು ದೃಷ್ಟಿಯಲ್ಲಿಟ್ಟುಕೊಂಡು ಸಾರ್ಥಕ ಸೇವೆಯನ್ನು ಸಲ್ಲಿಸುವಂತಾಗಲಿ, ಶ್ರೀ ಬಿ.ಎಸ್. ಪರಮಶಿವಯ್ಯನವರು ಇಷ್ಟಕ್ಕೂ ತೃಪ್ತರಾಗದೆ ಬಸವಣ್ಣನವರ ಹೆಸರಿನಲ್ಲಿ ಬೃಹತ್ ಆಸ್ಪತ್ರೆಯನ್ನು ನಿರ್ಮಾಣ ಮಾಡಿ ಜನಸಾಮಾನ್ಯರಿಗೂ ಎಟಕುವ ರೀತಿಯಲ್ಲಿ ಸೇವೆಯನ್ನು ಸಲ್ಲಿಸುವಂತ ಯೋಜನೆಯನ್ನು ರೂಪಿಸಿ ಅನುಷ್ಠಾನಗೊಳಿಸುವಂತಾಗಲಿ ಎಂದು ಹಾರೈಸಿದರು.

ನಾಮಫಲಕವನ್ನು ಅನಾವರಣಗೊಳಿಸಿದ ಶ್ರೀ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ ಜನರು ಹಣ ಸಂಪಾದನೆಯ ಬೆನ್ನು ಹತ್ತಿದ್ದಾರೆ. ಹಣ ಸಂಪಾದನೆ ಮಾಡುವಲ್ಲಿ ತೋರಿಸುವ ಆಸಕ್ತಿ ಆರೋಗ್ಯವನ್ನು ಕಾಪಾಡಿಕೊಳ್ಳಲು ತೋರುತ್ತಿಲ್ಲ. ಹಣದಿಂದ ಸಕಲ ವೈಭೋಗವನ್ನು ಕೊಳ್ಳಬಹುದು. ಆದರೆ ಆರೋಗ್ಯವನ್ನು ಕೊಳ್ಳಲು ಆಗುವುದಿಲ್ಲ. ಇದನ್ನು ಅರ್ಥಮಾಡಿಕೊಂಡು ಆರೋಗ್ಯ ಕಡೆ ಗಮನಹರಿಸಬೇಕು ಎಂದು ಕರೆ ನೀಡಿದರು.

ಇದೇ ಸಂದರ್ಭದಲ್ಲಿ ವೈದ್ಯಕೀಯ ಕ್ಷೇತ್ರದಲ್ಲಿ ಅನುಪಮ ಸೇವೆ ಸಲ್ಲಿಸಿದ ಡಾ. ಟಿ.ಕೆ. ನಾಗಭೂಷಣ, ಡಾ. ಶಿವಾನಂದ, ಡಾ. ಬಿ.ಎಸ್. ಚಂದ್ರಶೇಖರ್ ಹಾಗೂ ಡಾ. ನಾಗೇಶ್ ಅವರನ್ನು ಹಾಗೂ ಕಟ್ಟಡ ನಿರ್ಮಾಣಕ್ಕೆ ಮಾಡಲು ನೆರವಾದವರನ್ನು, ಸಹಕಾರ ನೀಡಿದವರನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಸನ್ಮಾನಿಸಿ ಆಶೀರ್ವದಿಸಿದರು.

ಮುಖ್ಯ ಅತಿಥಿಗಳಾಗಿದ್ದ ಸಂಸದೆ ಕುಮಾರಿ ಶೋಭಾ ಕರಂದ್ಲಾಜೆ, ವಸತಿ ಸಚಿವ ಶ್ರೀ ಎಂ. ಕೃಷ್ಣಪ್ಪ ಅವರು ಮಾತನಾಡಿ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯು ಶ್ರೀ ಬಿ.ಎಸ್. ಪರಮಶಿವಯ್ಯನವರ ನೇತೃತ್ವದಲ್ಲಿ ಸಮಾಜಮುಖಿಯಾಗಿ ಸಲ್ಲಿಸುತ್ತಿರುವ ಸೇವೆಯನ್ನು ಶ್ಲಾಘಿಸಿದರು. ಸಮಾರಂಭದಲ್ಲಿ ಮಾಜಿ ಉಪ ಮಹಾಪೌರರಾದ ಶ್ರೀ ಬಿ.ಎಸ್. ಪುಟ್ಟರಾಜು, ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ದಿವ್ಯ ಸಾನ್ನಿಧ್ಯ ವಹಿಸಿದ್ದ ಜಗದ್ಗುರು ಪ್ರಸನ್ನ ರೇಣುಕ ವೀರಸೋಮೇಶ್ವರ ಶಿವಾಚಾರ್ಯ ಭಗವತ್ಪಾದರು ತಮ್ಮ ಆಶೀರ್ವಚನದಲ್ಲಿ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆ ಸಮಾಜಕ್ಕೆ



ಉತ್ತಮ ಸೇವೆ ಸಲ್ಲಿಸುತ್ತಾ ಬಂದಿದೆ ಎಂದು ಪ್ರಶಂಸಿಸಿದರು. ಪುರಾತನ ಕಾಲದಿಂದಲೂ ಸಮಾಜದಲ್ಲಿ ಸಾಮರಸ್ಯ, ಸಮನ್ವಯವನ್ನು ಸಾಧಿಸಿಕೊಂಡು ಬರುತ್ತಿರುವುದನ್ನು ಪ್ರಸ್ತಾಪಿಸಿ, ಇತ್ತೀಚೆಗೆ ರಾಜಕೀಯ ಬೇಳೆಯನ್ನು ಬೇಯಿಸಿಕೊಳ್ಳುವುದಕ್ಕಾಗಿ ಕೆಲವು ಪಟ್ಟಭದ್ರ ಹಿತಾಶಕ್ತಿಯುಳ್ಳವರು ಸಮಾಜವನ್ನು ಒಡೆಯುವ, ಕಾರ್ಯದಲ್ಲಿ ತೊಡಗಿರುವುದಕ್ಕೆ ವಿಷಾದ ವ್ಯಕ್ತಪಡಿಸಿದರು.

*ವರದಿ : ಎಚ್.ಎಸ್. ಸಿದ್ಧಗಂಗಪ್ಪ*

ಶ್ರೀ ಸಿದ್ಧಗಂಗಾ ಮಠ, ತುಮಕೂರು

**ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ**

**ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.**

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೯೩೭. | ಶ್ರೀಮತಿ ಶ್ರೀ ಗಿರಿಜರುದ್ರಯ್ಯ ಮತ್ತು ಕುಟುಂಬ ಬೆಂಗಳೂರು | ೧,೦೦೧.೦೦ |
| ೧೯೩೮. | ಶ್ರೀ ಹೆಚ್. ನರಸಯ್ಯ ಬೆಂಗಳೂರು | ೧,೦೦೧.೦೦ |
| ೧೯೩೯. | ಶ್ರೀ ಆನಂದ ಶಶಿಧರ ಕೊಂಚಿಗಾರ್ ಬ್ಯಾಡಗಿ | ೧,೦೦೦.೦೦ |
| ೧೯೪೦. | ಶ್ರೀಮತಿ ಎಸ್. ಚಂದ್ರಕಲ ಶರಣೆ ಶಿವಮ್ಮ ಮತ್ತು ಶರಣೆ ಶ್ರೀ ಕಾಂತಮಣಿ, ಐಜೂರ್ | ೨,೫೦೦.೦೦ |
| ೧೯೪೧. | ಶ್ರೀ ಕರಿಸಿದ್ಧಯ್ಯ ತಿಪಟೂರು | ೨,೦೦೦.೦೦ |
| ೧೯೪೨. | ಶ್ರೀ ತುಳಸೀರಾಮಯ್ಯ ಬೆಂಗಳೂರು | ೩೫,೦೦೦.೦೦ |
| ೧೯೪೩ | ಶ್ರೀಮತಿ ಗುರುತಾಯಮ್ಮ ಹೆಚ್.ಪಿ. ಶ್ರೀ ಪುಟ್ಟಸ್ವಾಮಿ (ಪಾಂಡು), ಹಸಗುಳಿ | ೫,೦೦೦.೦೦ |
| ೧೯೪೪. | ಶ್ರೀ ಜಯಣ್ಣ ಹುಸ್ಕೂರು | ೫,೦೦೧.೦೦ |
| ೧೯೪೫. | ಶ್ರೀ ಎಂ. ಮಂಜುನಾಥ್ ತುಮಕೂರು | ೧,೦೦೦.೦೦ |
| ೧೯೪೬. | ಶ್ರೀ ಎನ್.ಕೆ. ದಾಮೋದರ ಬೆಂಗಳೂರು | ೬,೦೦೦.೦೦ |
| ೧೯೪೭. | ಶ್ರೀ ಜಿ.ಸಿ. ಜಯರತ್ನಮ್ಮ ಬೆಂಗಳೂರು | ೧,೦೦೧.೦೦ |
| ೧೯೪೮. | ಶ್ರೀ ಮಿಲಿಂಟ್ ನಿತ್‌ಸುರೆ ಥಾಣೆ | ೨,೦೫೨.೦೦ |
| ೧೯೪೯. | ಶ್ರೀ ಆರ್. ಅರವಿಂದ ಬೆಂಗಳೂರು | ೪,೦೦೦.೦೦ |
| ೧೯೫೦. | ಶ್ರೀ ವನಜಾಕ್ಷಿ ಪುಟ್ಟಪ್ಪ ಕನಕುಪ್ಪೆ, ಹಾಸನ | ೨,೦೦೦.೦೦ |
| ೧೯೫೧. | ಶ್ರೀ ಎಂ. ಪುಟ್ಟಪ್ಪ ಮೂಕವಳ್ಳಿ | ೧,೦೦೦.೦೦ |
| ೧೯೫೨. | ಶ್ರೀ ಕೃಷ್ಣಮೂರ್ತಿ ರಾಮಲಿಂಗಮ್ ತಿಮ್ಮಯ್ಯನಹಟ್ಟಿ | ೧,೫೦೦.೦೦ |
| ೧೯೫೩. | ಶ್ರೀಮತಿ ಸುನಂದ ನಟರಾಜನ್ ಬೆಂಗಳೂರು | ೫,೦೦೦.೦೦ |
| ೧೯೫೪. | ಶ್ರೀಮತಿ ಅನಸೂಯಮ್ಮ ತುಮಕೂರು | ೪,೦೦೦.೦೦ |
| ೧೯೫೫. | ಶ್ರೀ ಹೆಚ್.ಎನ್. ನಟರಾಜ್ ಬೆಂಗಳೂರು | ೧,೦೦೦.೦೦ |
| ೧೯೫೬. | ಶ್ರೀ ಮಹಂತೇಶ್ ಹಿರೇಬೊಮ್ಮನಹಳ್ಳಿ | ೨,೦೦೦.೦೦ |
| ೧೯೫೭. | ಶ್ರೀ ಪಿ.ಎಲ್. ಗಿರೀಶ ಬಂಡೀಹಳ್ಳಿ | ೧೬,೦೦೧.೦೦ |
| ೧೯೫೮. | ಶ್ರೀ ಬಿ.ಸಿ. ಬಸವರಾಜಯ್ಯ ಬೀರಸಂದ್ರ | ೧,೦೦೦.೦೦ |
| ೧೯೫೯. | ಶ್ರೀ ಲಕ್ಷ್ಮಿನಾರಾಯಣ ನಿಟ್ರಹಳ್ಳಿ | ೫,೦೦೦.೦೦ |
| ೧೯೬೦. | ಶ್ರೀ ಹೆಚ್. ನರಸಿಂಹಮೂರ್ತಿ ನಿಟ್ರಹಳ್ಳಿ | ೫,೦೦೦.೦೦ |
| ೧೯೬೧. | ಶ್ರೀ ಚರಣ್ ಖಿ/ಂ ಉಮೇಶ್ ಡಿ.ಆರ್. ಬೆಂಗಳೂರು | ೧,೦೦೦.೦೦ |
| ೧೯೬೨. | ಶ್ರೀ ಕೆ.ಸಿ. ಬಸವರಾಜು ಶ್ರೀನಿವಾಸಪುರ | ೧,೫೦೦.೦೦ |
| ೧೯೬೩. | ಶ್ರೀ ಎಂ.ಹೆಚ್. ಅಗಸ ಬಗಲ್‌ವಾರ್ ಶಿವಮೊಗ್ಗ | ೧,೦೦೦.೦೦ |
| ೧೯೬೪. | ಡಾ. ಎಂ.ಎನ್. ಚನ್ನಬಸಪ್ಪ ನಿರ್ದೇಶಕರು, ಎಸ್.ಐ.ಟಿ., ತುಮಕೂರು | ೧೯,೩೩೦.೦೦ |
| ೧೯೬೫. | ಶ್ರೀ ಜಿ.ಕೆ. ಪುಟ್ಟಲಿಂಗಪ್ಪ ಮಧುಗಿರಿ | ೧,೦೦೦.೦೦ |
| ೧೯೬೬. | ಶ್ರೀ ಆರ್.ಪಿ. ಶಿವಸ್ವಾಮಿ ಮೈಸೂರು | ೧,೧೧೦.೦೦ |
| ೧೯೬೭. | ಶ್ರೀ ವಿಶ್ವನಾಥ ಬೆಂಗಳೂರು | ೩,೦೦೧.೦೦ |
| ೧೯೬೮. | ಶ್ರೀ ಹೆಚ್.ಬಿ.ಎಸ್. ಆರಾಧ್ಯ ಬೆಂಗಳೂರು | ೧೦,೦೦೦.೦೦ |
| ೧೯೬೯. | ಶ್ರೀ ಆರ್.ಎನ್. ಶಿವಲಿಂಗಪ್ಪ ತಿಪಟೂರು | ೨,೦೦೦.೦೦ |
| ೧೯೭೦. | ಡಾ. ಎಂ.ಜಿ. ನಾಗರಾಜು ಬೆಂಗಳೂರು | ೧೦,೫೦೦.೦೦ |
| ೧೯೭೧. | ಪ್ರೊ. ಡಾ. ಎಸ್. ಸಿದ್ಧಪ್ಪ ಬೆಂಗಳೂರು | ೧೦,೧೦೦.೦೦ |
| ೧೯೭೨. | ಶ್ರೀ ಎಂ.ಆರ್. ಬೈಲಪ್ಪ ಹೊಸೂರು | ೨,೦೦೦.೦೦ |
| ೧೯೭೩. | ಶ್ರೀ ನಾಗಭೂಷಣ ಲಿಂಗಸಗೂರು | ೧,೦೦೦.೦೦ |

*(ಮುಂದುವರೆಯುತ್ತದೆ)*



ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ೬೩ನೇ ವಾರ್ಷಿಕ ಮಹಾಧಿವೇಶನ ಹಾಗೂ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು, ಪೂಜ್ಯ ಶ್ರೀ ವೀರೇಶಾನಂದ ಸರಸ್ವತಿ ಮಹಾಸ್ವಾಮಿಗಳು, ಹರಗುರು ಚರಮೂರ್ತಿಗಳು, ಪೂಜ್ಯ ಅಕ್ಕ ಅನ್ನಪೂರ್ಣ ತಾಯಿ, ಸಂಘಸಿರಿ ಪ್ರಶಸ್ತಿ ಪುರಸ್ಕೃತರಾದ ಶ್ರೀ ಡಿ.ಪಿ. ಸಿದ್ಧಗಂಗಯ್ಯ, ಶ್ರೀ ವಿ.ಪಿ. ಗಂಗಣ್ಣ, ಶ್ರೀ ರಾಜಶೇಖರ ಶಿವಬಸಪ್ಪ ಮಾಗನೂರ, ಶ್ರೀ ಶಂಭುಲಿಂಗಪ್ಪ ಪುಟ್ಟಪ್ಪ ಅಂಗಡಿ ಹಾಗೂ ಶ್ರೀ ಬಿ.ಸಿ. ಮಳೀಮಠ ಅವರು ಉಪಸ್ಥಿತರಿದ್ದರು.



ಮೈಸೂರಿನ ಶ್ರೀಮತಿ ಹೆಚ್.ಎಂ. ಅಕ್ಕಮಹಾದೇವಿಯವರು ಹೊರತಂದ ಪರಮಪೂಜ್ಯ ಶ್ರೀ ಶ್ರೀಗಳವರ ನೆಚ್ಚಿನ ವಚನಗಳ 'ವಚನ ಸಂಜೀವಿನಿ' ಸಿ.ಡಿ.ಯನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಲೋಕಾರ್ಪಣೆ ಮಾಡಿದರು.



ಬೆಂಗಳೂರಿನ ಕೆ.ವಿ.ವಿ. ಸಂಸ್ಥೆಯವರು ನಿರ್ಮಿಸಿರುವ 'ಬಸವಶ್ರೀ ಡಯಾಗ್ನಸ್ಟಿಕ್ ಕೇಂದ್ರ'ದ ಲೋಕಾರ್ಪಣೆ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಸೇರಿದಂತೆ ವಿವಿಧ ಮಠಾಧೀಶರು, ಬಿ.ಜೆ.ಪಿ. ರಾಜ್ಯಾಧ್ಯಕ್ಷರಾದ ಶ್ರೀ ಬಿ.ಎಸ್. ಯಡಿಯೂರಪ್ಪ, ಸಚಿವ ಶ್ರೀ ಎಂ. ಕೃಷ್ಣಪ್ಪ, ಕೆ.ವಿ.ವಿ. ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಿ.ಎಸ್. ಪರಮಶಿವಯ್ಯ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

email ID : geetanjaligraphics@gmail.com